# ವೀರಕಾಂತಾ.

[ಐತಿಹಾಸಿಕ ಕಾದಂಬರಿ]



ಲೇಖಕ:—

ಚಿದಂಬರ ಯಜ್ಞೇಶ್ವರ ದೀಕ್ಷಿತ,

ಶಾಲಾ ಮಾಸ್ತರ, ದೊಡವಾಡ.



ಪ್ರಕಾಶಕ:—

ಭಿ. ಪ. ಕಾಳೆ,

ಪ್ರೊಪ್ರಾಯಿಟರ, ಶ್ರೀ ಶೇಷಾಚಲ ಪ್ರಿಂಟಿಂಗ ಪ್ರೆಸ್ಸ,

ಆನಂದವನ.



[೨ನೆಯ ಆವೃತ್ತಿ.]

ಬೆಲೆ ೧೦ ಆಣೆ.

ಈ ಕಾದಂಬರಿಯು ಐತಿಹಾಸಿಕವಿದ್ದು, ಮನೋವೇಧಕವಿ ರುತ್ತದೆ ಇಂಥ ಉತ್ತಮ ಜೋಧಪುರ ಪ್ರಸಂಗವನ್ನು ಆರಿಸಿ, ಗ್ರಂಥರೂಪದಿಂದ ಬರೆದ ಶ್ರೀ. ಚಿದಂಬರ ಯಜ್ಞೇಶ್ವರ ದೀಕ್ಷಿತ, ಇವರಿಗೆ ನಮ್ಮ ಕನ್ನಡ ಸಮಾಜವು ತುಂಬಾ ಆಭಾರಿಯಾಗಿರುವದು.

ಶೀಲಸಂರಕ್ಷಣವು ಮನುಷ್ಯನ ಆಯುಷ್ಯದಲ್ಲಿಯ ಮುಖ್ಯ ಕರ್ತವ್ಯವು. ಸಂಕಟ ಬಂದಾಗ ಈ ಶೀಲವನ್ನು ಸಂರಕ್ಷಿಸಿಕೊಳ್ಳುವ ವನೇ ಮನುಷ್ಯತ್ವವುಳ್ಳವನೆಂದು ಹೇಳಬಹುದು ಸಂಕಟಕ್ಕೆ ಅಂಜಿ, ಶೀಲಭ್ರಷ್ಟನಾಗುವವನು ಮನುಷ್ಯಾಧಮನೆಂದು ತಿಳಿಯಬೇಕು. ಈ ಶೀಲವನ್ನು ಕಾಯ್ದುಕೊಳ್ಳುವದರಲ್ಲಿ ನಮ್ಮ ಪೂರ್ವಜರು ಹೆಸರು ವಾಸಿಗಳಾದವರು. ಅವರಿಗೆ ಬಂದಷ್ಟು ಸಂಕಟಗಳು ಇನ್ನಾರಿಗೂ ಯಾವ ಕಾಲದಲ್ಲೂ ಬಂದಿರಲಿಕ್ಕಿಲ್ಲ ಪುರಾಣೇತಿಹಾಸಗಳಲ್ಲಿ ನಮ್ಮ ಪ್ರಾಚೀನರಿಗೊದಗಿದ ವಿಪತ್ತುಗಳ ವರ್ಣನವು ವಿಶೇಷವಾಗಿರುತ್ತದೆ.

ಪ್ರಸ್ತುತದ ಕಾದಂಬರಿಯು ಇಂಥ ಒಂದು ಕಥಾನಕವನ್ನು ಹೃದಯ ವಿದಾರಣವಾಗುವಂತೆ ವರ್ಣಿಸುತ್ತದೆ. ಮಾನಕುಮಾರಿ ಯೆಂಬ ಓರ್ವ ತರುಣಿಯು ರೂಪ, ವೈಭವಾತಿಶಯದ ಮೂಲಕ ದುರ್ಜನರಿಂದ ಅಪಹರಿಸಲ್ಪಟ್ಟು, ಅನೇಕ ವಿಧ ಕಷ್ಟಗಳಿಗೆ ಗುರಿ ಯಾಗಿ, ಕಡೆಗೆ ತನ್ನ ಸತ್ವದಿಂದ ಪಾರಾಗಿ, ಸುಖದ ದಿನಗಳನ್ನು ಕಂಡಳು ಪ್ರತ್ಯಕ್ಷ ಬಾದಶಹನ ಸಮಾಗಮ ಸುಖವು ಲಭಿಸುತ್ತಿ ರೂ, ಆ ಸುಖವನ್ನು ಕಃಪದಾರ್ಥವೆಂದು ಭಾವಿಸಿದ ಆ ಸತಿಯ ಪತಿಭಕ್ತಿಯನ್ನೂ, ಶೀಲಸಂಪನ್ನತೆಯನ್ನೂ ವರ್ಣಿಸಲಸದಳವು. ಇಂಥ ಪ್ರಾತಃಸ್ಮರಣೀಯರಾದ ಸಾಧ್ವೀಶಿರೋಮಣಿಗಳು ಈ ನಮ್ಮ ಭರತಖಂಡದಲ್ಲಿ ಆಗಿ ಹೋಗಿರುವರೆಂತಲೇ, ಇದುವರೆಗೂ ಭರತ ಖಂಡದ ಕೀರ್ತಿಯು ಸ್ಥಿರವಾಗಿ ಉಳಿದಿರುವದು.

ಸಜ್ಜನ ವಿಧೇಯ,

ರಾ. ತ್ರ್ಯ. ಕರ್ಪೂರ.

# ವೀರಕಾಂತಾ.



## ಶುಭಾಶೀರ್ವಾದ.

ಭಾರತಖಂಡದ ಮುತ್ತಜ್ಜನಂತೊಪ್ಪುವ ಹಿಮಗಿರಿರಾಜನ ದಿವ್ಯಪ್ರದೇಶವು; ಎಲ್ಲೆಲ್ಲಿ ನೋಡಿದರೂ ಬರ್ಫದ ಆಚ್ಛಾದನವು; ತಂಡಿಯ ಸಾಮ್ರಾಜ್ಯವು; ಮಾನವರ ಕಲಕಲಾಟವಾಗಲಿ, ಪಕ್ಷಿಗಳ ಕಿಲಿಕಿಲಾಟವಾಗಲಿ ಇರುವದಿಲ್ಲ. ಅಂತೆಯೇ ಯೋಗಸಂಪನ್ನರೂ, ದಿವ್ಯದೇಹಿಗಳೂ ಇಲ್ಲಿ ತಪಸ್ಸನ್ನಾಚರಿಸುತ್ತ ಬ್ರಹ್ಮಾನಂದಮಗ್ನರಾಗಿರುವರು; ಆದರೆ ಸಾಮಾನ್ಯ ಮಾನವರಿಗೆ ಈ ಸ್ಥಳವು ದುರ್ಗಮವಾಗಿರುವದು ಒಂದುವೇಳೆ ಈ ಪ್ರದೇಶದ ಕೆಲನೆಡೆಗಳಲ್ಲಿ ಕಷ್ಟಬಟ್ಟು ಹೋದರೂ, ಅಲ್ಲಿಯ ಸ್ವಾಭಾವಿಕತಂಡಿಯನ್ನು ಸಹಿಸುವದು ಬಲು ಕಷ್ಟವಾಗುವದು

ಈ ಹಿಮಸಾಮ್ರಾಜ್ಯದ ಕಡೆಯ ಉಕ್ಕಡದಲ್ಲಿ ಒಬ್ಬ ಯೋಗಿವರ್ಯನು ವಾಸಿಸುತ್ತಿದ್ದನು. ಆತನು ಚಳಿಗೆ ಸ್ವಲ್ಪದರೂ ಅಂಜದೆ ಮೈತುಂಬ ಭಸ್ಮವನ್ನು ಚರ್ಚಿಸಿಕೊಂಡು, ಪದ್ಮಾಸನಸ್ಥನಾಗಿ ಪ್ರಚ್ಛನ್ನದಿಂದ ಕುಳಿತುಕೊಂಡಿದ್ದನು ಒಂದು ಕೌಪೀನದ ಹೊರತು ಯಾವ ಪ್ರಾವರಣಗಳೂ ಅವನ ಮೈಮೇಲಿರಲಿಲ್ಲ. ಅವನ ತಲೆಯ ಮೇಲೆ ಜಟಾಭಾರವು ಒಪ್ಪುತ್ತಿತ್ತು ಆವನು ಅತ್ಯಂತ ತೇಜಸ್ವಿಯಾಗಿದ್ದನು ಪುಟಕ್ಕೆ ಹಾಕಿದ ಚೊಕ್ಕ ಬಂಗಾರದಂತೆ. ಅವನ ಅಂಗಕಾಂತಿಯು ಅದ್ವಿತೀಯ ತೇಜಸ್ವಿತೆಯನ್ನು ವ್ಯಕ್ತಗೊಳಿಸುತ್ತಿತ್ತು. ಆ ತೇಜಃಪುಂಜನ ಎದುರಿಗೆ ಬೇರೊಬ್ಬ ಮನುಷ್ಯನು ಒಳ್ಳೇ ವಿನೀತನಾಗಿ ಕುಳಿತುಕೊಂಡಿದ್ದನು ಅವನ ಆಗಿನ ಭಾವದಿಂದ ನೋಡಿದರೆ, ಅವನು ಆ ಯೋಗಿವರೇಣ್ಯನ ಆಶ್ರಯಕ್ಕೆ ಬಂದ ನವಶಿಷ್ಯನೆಂದು ಸ್ಪಷ್ಟವಾಗಿ ಕಂಡು ಬರುತ್ತಿತ್ತು. ಅವನು ಆ ಯೋಗಿ

ಶ್ರೀಷ್ಮನಂತೆ ಬರಿವೈಯಿಂದ ಕುಳಿತುಕೊಂಡಿರಬೆ, ಬಹು ದಪ್ಪವಾದ ಕಂಬಳಿಯನ್ನು ಚನ್ನಾಗಿ ಹೊತ್ತುಕೊಂಡಿದ್ದನು. ಅವನ ಸರ್ವಾಂಗವು ಆ ಕಂಬಳಿಯಿಂದ ಮುಚ್ಚಲ್ಪಟ್ಟದ್ದರಿಂದ ಅವನು ಎಂಥ ಮನುಷ್ಯನಿರುವನೆಂಬದು ತಿಳಿಯುವಂತಿರಲಿಲ್ಲ. ಸ್ವಲ್ಪ ಹೊತ್ತಿನಲ್ಲಿ ಆ ಯೋಗಿಗಳು ಅವನನ್ನು ಕುರಿತು ಇಂತು ನುಡಿದರು:—

"ಹೃದಯದಲ್ಲಿಯ ದುಃಖವನ್ನು ಮರೆಸು ಪರಮಾತ್ಮನ ಚರಣಾರವಿಂದಗಳನ್ನು ಭಜಿಸು; ಸುಖ-ದುಃಖಗಳು ಮನಸ್ಸಿನ ವಿಕಾರಗಳು. ಈ ವಿಕಾರವೇ ಮನುಷ್ಯನನ್ನು ಅಧೋಗತಿಗೆ ಮುಟ್ಟಿಸುತ್ತದೆ. ಪರಮಾತ್ಮನ ಚಿಂತನೆಯಿಂದ ಈ ವಿಕಾರವು ನಷ್ಟವಾಗುತ್ತದೆ"

"ಗುರುಗಳೇ, ನಾನಾದರೂ ಪರಮಾತ್ಮನ ಚಿಂತನೆಯಲ್ಲಿಯೇ ಕಾಲಕಳೆಯಬೇಕೆಂದು ಬಹಳವಾಗಿ ಯತ್ನಿಸುತ್ತೇನೆ; ಆದರೆ ಮನಸ್ಸಿನ ತಳಮಳವು ಪರಮಾತ್ಮನಲ್ಲಿ ಸ್ಥಿರಚಿತ್ತನ್ನಿಡಗೊಡದಾಗಿದೆ. ಏನು ಮಾಡಿದರೂ ಈ ತಳಮಳವು ನನ್ನ ಹೃದಯದಿಂದ ಹೊರಬೀಳಲೊಲ್ಲದು."

"ಹಾಗಾದರೆ ನೀನು ಇಲ್ಲಿದ್ದು ಪ್ರಯೋಜನವೇನು? ಸ್ವದೇಶಕ್ಕೆ ಹೊರಟು ಹೋಗು. ನಿನ್ನಂಥ ದುರ್ಬಲಮನಸ್ಸಿನವನಿಂದ ಈ ಕಠಿಣವಾದ ಯೋಗಮಾರ್ಗವನ್ನು ಕ್ರಮಿಸುವದು ಆಗಲಿಕ್ಕಿಲ್ಲ."

ಯೋಗಿವರೇಣ್ಯನ ಈ ಮಾತುಗಳನ್ನು ಕೇಳಿದ ಕೂಡಲೆ ಶಿಷ್ಯನ ಕಣ್ಣುಗಳಲ್ಲಿ ಅಶ್ರುಗಳಾಡಿದವು ಅವನ ಕುತ್ತಿಗೆಯು ಶಿರವು ಬಿಗಿದು ಬಂದಿತು. ಮಾತಾಡಲಿಕ್ಕೆ ಬಾರದಾಯಿತು ಅವನು ಸುಮ್ಮನೆ ಸಜಲನೇತ್ರಗಳಿಂದ ಗುರುಮುಖವನ್ನು ನೋಡುತ್ತ ಕುಳಿತುಬಿಟ್ಟನು. ಆಗ ಗುರುಗಳು ಇಂತು ನುಡಿದರು: "ನೀನು ಇನ್ನು ಮೇಲೆ ಇಲ್ಲಿ ನಿಲ್ಲಬೇಡ; ನಿನ್ನ ಹೃದಯದಲ್ಲಿಯ ಮೋಹಾಂಧಕಾರವು ಇನ್ನೂ ತೊಲಗಿಲ್ಲ; ಮತ್ತು ಕಡಿಮೆಯಾಗುವ ಲಕ್ಷಣವೂ ಇಲ್ಲ"

ಗುರುಗಳು ಪುನಃ ಪುನಃ ಅದೇ ಮಾತನಾಡಿದ್ದನ್ನು ನೋಡಿ, ಶಿಷ್ಯನ ಹೃದಯವು ಮತ್ತಿಷ್ಟು ಇಬ್ಬಾಗವಾಯಿತು ಅವನ ಮೇಲೆ ಆಕಾಶವೇ ಹರಿದು ಬಿದ್ದಂತಾಯಿತು ಆಗ ಅವನು ಮುಂದು ಬಂದು, ಗುರುಚರಣಕ್ಕೆರಗಿ ಕಂಬನಿಗಳಿಂದ ಗುರುಚರಣ ಪ್ರಕ್ಷಾಲನೆಯನ್ನು ಮಾಡಿ ದೀನಮುಖದಿಂದ:—"ಗುರುಗಳೇ, ಈ ದೀನದಾಸ

ಶ್ರೀ

# ಸಮರ್ಪಣ.

ನನ್ನಯ ಈ ಅಲ್ಪ ಸಾಹಿತ್ಯ ಸೇವೆಯನ್ನು ಚಿಕ್ಕಂದಿ

ನಿಂದಲೂ ನನ್ನ ಲಾಲನ-ಪಾಲನೆಗಳನ್ನು

ಮಾಡಿ, ತಕ್ಕ ಶಿಕ್ಷಣವನ್ನು ಕೊಟ್ಟಂಥ

ಪ್ರಿಯ ಬಂಧುವಾದ

**ಶ್ರೀ. ತಮ್ಮಣದೀಕ್ಷಿತ**

ರವರಿಗೆ ಅತಿ ನಮ್ರತೆ

ಯಿಂದಲೂ, ಭಕ್ತಿಯಿಂದಲೂ

ಸಮರ್ಪಿಸುವೆ.

**ಚಿದಂಬರ.**

## ಬರಹಗಾರನ ಮುನ್ನುಡಿ.

ವಾಙ್ಮಯ ವಿಶಾರದರನೇಕರು ಕರ್ನಾಟಕ ಮಾತೆಯ ಸೇವೆಯನ್ನು ಪಲವು ಬಗೆಯಿಂದ ಮಾಡುತ್ತಿರುವದನ್ನೀಕ್ಷಿಸಿ, ಅವರಂತೆ ನಾನಾದರೂ ಕರ್ನಾಟಕ ಮಾತೆಯ ಸೇವಕನೆಂದು ಹಿಮ್ಮೆಯಾದರೂ ಪ್ರಚುರಗೊಳ್ಳಬಹುದೊ? ಎಂಬ ಹಂಬಲವು ಬಹು ದಿವಸಗಳಿಂದ ನನ್ನಲ್ಲಿ ಮನೆ ಮಾಡಿಕೊಂಡಿತ್ತು. ಈ ಹಂಬಲದರುವು ಸಹೃದಯಿಗಳ ಹುರುಪಿನ ಪ್ರೇಮತುಷಾರಗಳಿಂದ ಭರದಿಂದ ಬೆಳೆದು, ಅದರ ಇನಿದಾದ ಫಲವು 'ವೀರಕಾಂತೆ'ಯ ರೂಪದಿಂದ ಓದುಗರ ಕೈಗೆ ಐದು ವರುಷಗಳ ಪೂರ್ವದಲ್ಲಿಯೇ ಬಿತ್ತು. ಈ ಫಲವು ಕನ್ನಡ ಓದುಗರಿಗೆ ರುಚಿಸಬಹುದೊ? ನನ್ನಯ ಈ ಪ್ರಥಮ ಪ್ರಯತ್ನವಾದ ಅಂಕ-ಡೊಂಕ ಆಭರಣವು ಕನ್ನಡ ಭಾಷಾಸುಂದರಿಗೆ ಶೋಭೆಯನ್ನುಂಟು ಮಾಡಬಹುದೋ? ಎಂಬ ಸಂದೇಹವು ಮಾತ್ರ, ವಾಙ್ಮಯ ಸೃಷ್ಟಿಯಲ್ಲಿ ಹೊಸಬನಾದ ನನಗೆ ಬಹು ಬಾಧಿಸುತ್ತಿತ್ತು; ಆದರೆ ಅನುಭವಾಂತ್ಯದಲ್ಲಿ ಈ ಸಂದೇಹವು ನಿರಾಧಾರವೆಂದು ಮನವರಿಕೆಯಾದುದರಿಂದ, ಕೃತಕೃತ್ಯನಾದೆನೆಂದು ಆನಂದ ಹೊಂದುತ್ತಿದ್ದ ನನ್ನನ್ನು ಮಿ| ಕಾಳೆ ಇವರು ಅಕಲ್ಪಿತವಾಗಿ ಪ್ರೋತ್ಸಾಹಿಸಿ, ವೀರಕಾಂತೆಯನ್ನು ಪುನಃ ಪ್ರಸಿದ್ಧಿಸಲು ಅಣಿಮಾಡಿದ್ದರಿಂದ, ಅವರಿಗೆ ನಾನು ತುಂಬಾ ಕೃತಜ್ಞನಾಗಿರುವೆನಲ್ಲದೆ, ನನ್ನಯ ಸಾಹಿತ್ಯಸೇವೆಯನ್ನು ಪ್ರೇಮದಿಂದ ಕೈಕೊಂಡ ಕರ್ನಾಟಕ ಮಾತೆಯನ್ನು ಮನಃಪೂರ್ವಕವಾಗಿ ಅಭಿನಂದಿಸಿ, "ಮಾತೇ! ನಿನ್ನಯ ಈ ಮಂದಜ್ಞನಾದ ಕಂದನಿಂದ ಇದಕ್ಕೂ ಹೆಚ್ಚಿನ ಸೇವೆಯನ್ನು ಗದುಕೊಳ್ಳುವೆನೆಂದು ಅಭಯಗೊಡು!" ಎಂದು ಅನನ್ಯಭಾವದಿಂದ ನಮಿಸಿ, ಈ ನಲುಮೆಯ ಮುನ್ನುಡಿಯನ್ನು ಮುಗಿಸುವೆನು.

ಸಜ್ಜನ ವಿಧೇಯ,

ಚಿದಂಬರ.

ನಿಗೆ ಸ್ವದೇಶವೆಂಬದು ಎಲ್ಲಿಯದು? ನನಗೆ ಸ್ಮಶಾನವೇ ಸ್ವದೇಶ ವಾಗಿರುವದು ಈ ದೀನದಾಸನ ದುರ್ಭಾಗ್ಯವು ತಮಗೆ ಗೊತ್ತಿದ್ದರೂ ಹೀಗೆ ನನ್ನನ್ನು ನಿರಾಕರಿಸುವದನ್ನು ನೋಡಿ, ನನಗೆ ಬಹಳ ದುಃಖವಾಗುತ್ತದೆ'' ಎಂದನು.

''ನಿನಗೆ ದುಃಖವಾಗಬೇಕೆಂದೇ ಹೀಗೆ ನುಡಿದಿರುವೆನು.''

''ಯಾಕೆ?''

'ಘೋರವಾದ ಪಾತಕದಿಂದ ನಿನ್ನನ್ನು ಉದ್ಧರಿಸುವದಕ್ಕಾಗಿ'

''ಹಾಗಾದರೆ, ಕೃಪಾಪೂರ್ವಕರಾಗಿ ಅನಾಥನ ಇಚ್ಛೆಯನ್ನು ಪೂರ್ಣ ಮಾಡಿರಿ''

''ಆ ಸಾಮರ್ಥ್ಯವು ನನಗಿಲ್ಲ''

''ತಾವು ಮನಸಿನ ಮೇಲೆ ತೆಗೆದುಕೊಂಡರೆ ಮಾಡಬಲ್ಲಿರಿ''

''ನೀನು ತೀರಾ ಚ ಕ್ಷುಲ್ಲಕನಿರುತ್ತೀ! ಎಲೋ, ಯೋಗಬಲ ದಿಂದ ಪ್ರಾಪ್ತವಾದ ಸಾಮರ್ಥ್ಯವನ್ನು ಪರರಿಗೆ ಕೊಡಲಿಕ್ಕೆ ಬರುವದೋ? ಯೋಗಬಲದಿಂದಲೇ ಅದನ್ನು ದೊರಕಿಸಿಕೊಳ್ಳಬೇಕು''

ಶಿಷ್ಯನು ಉತ್ಸುಕತೆಯಿಂದ:—''ಹಾಗಾದರೆ, ಆ ಸಾಮರ್ಥ್ಯವು ಎಷ್ಟು ವರುಷಗಳಲ್ಲಿ ಪ್ರಾಪ್ತವಾಗಬಹುದು?''

''ಅದು ನಿನ್ನ ಮಾನಸಿಕ ಸ್ಥಿತಿಯನ್ನು ಅವಲಂಬಿಸಿರುವದು; ಆದರೆ ಕ್ಷಣಾಂತ್ಯದಲ್ಲಿ ಆಗಬಹುದು. ಆಗದಿದ್ದರೆ, ಐವತ್ತು ವರುಷಗಳ ವರೆಗೆ ಶ್ರಮಬಟ್ಟರೂ ಪ್ರಾಪ್ತವಾಗಲಾರದು!''

ಖಿನ್ನವದನದಿಂದ:--''ಹಾಗಾದರೆ ನನ್ನ ವಾಸನೆಯು ಪೂರ್ಣವಾಗುವದಿಲ್ಲವೆಂದೇ ತಿಳಿಯಬೇಕು''

''ಎಲೋ ಹುಚ್ಚಾ, ಕಾಮ-ಲೋಭಗಳ ಜಾಲದಲ್ಲಿ ಸಿಕ್ಕ ಮನುಷ್ಯನು, ಎಂದಾದರೂ ಯೋಗಿಯಾಗಬಹುದೋ?''

''ಗುರುಗಳೇ, ನಾನು ನನ್ನ ಸುಖದ ಕಲ್ಪನೆಯನ್ನು ಯಾವಾಗಲೋ ಬಿಟ್ಟು ಬಿಟ್ಟಿರುವೆನು. ನನ್ನ ಇಚ್ಛೆಯು, ಕೇವಲ ಜಗತ್ಕಲ್ಯಾಣಕ್ಕೋಸ್ಕರವೇ ಇರುತ್ತದೆ''

'ಲೋಕಕಲ್ಯಾಣಕ್ಕೋಸ್ಕರವೇ ಆಗಲೆಂಬಲ್ಲಬೇಕೆ; ಮೊದಲು ಆಶೆಯನ್ನು ತ್ಯಜಿಸಿ, ನಿಷ್ಕಾಮ ಬುದ್ಧಿಯಿಂದ ತಪಸ್ಸನ್ನಾಚರಿಸಲಿಕ್ಕೆ ಬೇಕು''

'ಪ್ರಭೋ!' (ಆಶ್ಚರ್ಯಯುಕ್ತ ಮುದ್ರೆಯಿಂದ ಶಿಷ್ಯನು ಅನ್ನುತ್ತಾನೆ):—"ತಾವನ್ನುವದು ನೆಟ್ಟಗೆ ನನ್ನ ಲಕ್ಷದಲ್ಲಿ ಬರಲಿಲ್ಲವು. ಜಗತ್ಕಲ್ಯಾಣದ ಕಾಮನೆಯನ್ನು ತ್ಯಜಿಸಬೇಕೇನು? ತಾವು ಯಾವಾಗಲೂ ಲೋಕಕಲ್ಯಾಣವನ್ನೇ ಚಿಂತಿಸುತ್ತಿರುವಿರಲ್ಲ?"

"ಸಚ್ಚಿದಾನಂದ ಪರಮೇಶ್ವರನ ಮಂಗಲ ಇಚ್ಛೆಯು ಸದಾ ಪೂರ್ಣವಾಗಲಿ, ಇದೇ ನನ್ನ ಕಾಮನೆಯು; ಇದೇ ನನ್ನವಾಸನೆಯು!

"ಅಂದಮೇಲೆ ಈಗ ನಡೆದಂಥ ಭಯಂಕರ ಬೇಬಂದಶಾಹಿಯು ನಾಶವಾಗಬೇಕೆಂದು ಪರಮೇಶ್ವರನ ಇಚ್ಛೆಯು ಇರುವದಿಲ್ಲವೋ?"

"ಪ್ರಭುವಿನ ಇಚ್ಛೆಯಾದ ಕೂಡಲೆ ಎಲ್ಲ ಅತ್ಯಾಚಾರಗಳು ಕ್ಷಣಾರ್ಧದಲ್ಲಿ ನಾಶವಾಗಬಹುದು!"

"ಹಾಗಾದರೆ ಗುರುವರ್ಯರೇ, ಈಗ ಅಯೋಧ್ಯೆಯಲ್ಲಿ ಹಗಲು-ರಾತ್ರಿ ಅವ್ಯಾಹತವಾಗಿ ನಡೆಯುತಕ್ಕ ಘೋರ ಅತ್ಯಾಚಾರಗಳೂ, ದುಷ್ಕರ್ಮಗಳೂ ಮತ್ತು ಜುಲುಮೆಯ ಕೃತ್ಯಗಳೂ ಆ ದಯಾಮಯ ದೇವರ ಇಚ್ಛೆಯಿಂದಲೇ ನಡೆಯುತ್ತಿವೆಯೋ?"

ಶಿಷ್ಯನ ಮನಃಸ್ಥಿತಿಯನ್ನು ನೋಡಿ ಗುರುವು ಶಾಂತವೃತ್ತಿಯಿಂದ:—"ಬೇಟಾ! ವಿಶ್ವದಲ್ಲಿಯ ಗೂಢತತ್ವಗಳು ನಿನಗೆ ಇನ್ನೂ ನೆಟ್ಟಗೆ ತಿಳಿದಿಲ್ಲ. ಜುಲುಮೆ, ಅತ್ಯಾಚಾರ, ದುಃಖ, ವಿಪತ್ತಿ ಮತ್ತು ಸಂಕಟಗಳು ಯಾವದೊಂದು ಸಮಾಜದ ದುಷ್ಕರ್ಮದ ಫಲಗಳೆಂದು ಹೇಳಬಹುದು. ಮೊದಲು ದುಷ್ಕರ್ಮಗಳನ್ನು ಮಾಡುವಾಗ ಮನುಷ್ಯನಿಗೆ ಯಾವ ಪ್ರಕಾರದ ಆತಂಕವೂ ಅನಿಸುವದಿಲ್ಲ; —ಹಿಂದಿನಿಂದ ಅದರ ಫಲಗಳನ್ನು ಅನುಭವಿಸುವ ಕಾಲಕ್ಕೆ ಖಿಲ ಬ್ರಹ್ಮಾಂಡವು ನೆನಪಾಗುತ್ತದೆ! ಇದರಲ್ಲಿ ಈಶನ ವೇನು!"

ರುವಚನವನ್ನು ಲಾಲಿಸಿದ ಶಿಷ್ಯನು ತುಸ ಹೊತ್ತು ಮಾಡಿ: ಸ್ಥಿರಮನದಿಂದ "ಹಳ್ಳೇದ, ನನಗೆ ತಾವು ಏನು ಯನ್ನು ಮಾಡುವಿರಿ?"

ಗುರುವಾದರೂ ಅದಕ್ಕೂ ಹೆಚ್ಚು ಸ್ಥಿರವಾಣಿಯಿಂದ: "ನೀನು ದೀಗ ಅಯೋಧ್ಯೆಗೆ ಹೊರಟು ಹೋಗು."

ಅಯೋಧ್ಯೆಯ ಹೆಸರನ್ನು ಗುರುಮುಖದಿಂದ ಕೇಳಿದ ಕೂಡಲೆ ಪುನಃ ಆತನು ದೀನವಾಣಿಯಿಂದ: ‘‘ಅಯೋಧ್ಯೆಗೆ ಹೋಗಿ ನಾನೇನು ಮಾಡಲಿ? ಅಲ್ಲಿಯ ಘೋರ ದುಷ್ಕೃತ್ಯಗಳನ್ನು ನೋಡುವದೂ, ಸಹಿಸುವದೂ ನನ್ನಿಂದಾಗದು!!’’

‘‘ಇಂಥ ಅತ್ಯಾಚಾರಗಳು ಇನ್ನು ಬಹು ದಿವಸ ನಡೆಯಲಿಕ್ಕಿಲ್ಲ ಆ ಬಗ್ಗೆ ಚಿಂತಿಸಬೇಡ’’

ಗುರುವಚನವನ್ನು ಕೇಳಿ ಅತ್ಯುತ್ಸುಕತೆಯಿಂದ :‘‘ಪ್ರಭೋ! ಎಷ್ಟು ದಿವಸಗಳಲ್ಲಿ ದೂರವಾಗಬಹುದು?’’

‘‘ಬೇಟಾ, ಯಾವ ರಾಜ್ಯದಲ್ಲಿ ಇಂಥ ಅತ್ಯಾಚಾರಗಳು ಅವ್ಯಾಹತವಾಗಿ ನಡೆಯುವವೋ, ಆ ರಾಜ್ಯದ ಹ್ರಾಸಕಾಲವು ಸಮೀಪಕ್ಕೆ ಬಂದಿತೆಂದೇ ತಿಳಿಯಬೇಕು. ಸಮಾಜದಲ್ಲಿ ನೈತಿಕ ಮತ್ತು ಆಧ್ಯಾತ್ಮಿಕ ಉನ್ನತಿಯಾದರೆ, ಆದರ ಬಲದಿಂದ ರಾಜ್ಯದಲ್ಲಿ ನಡೆದ ಅತ್ಯಾಚಾರವು ನಾಶವಾಗುವದು.’’

‘‘ಈ ಭಯಂಕರ ಜುಲುಮೆಯು ದೂರವಾಗಲಿಕ್ಕೆ ಇದರ ಹೊರತಾಗಿ ಅನ್ಯ ಉಪಾಯಗಳಿಲ್ಲವೋ?’’

‘‘ಇಲ್ಲ. ಈ ಜುಲುಮೆಯು ನಾಶವಾಗುವ ಸಂಭವವಿಲ್ಲ ಮಾಡಿದಂಥ ಕರ್ಮದ ಫಲಗಳನ್ನು ಭೋಗಿಸಿದ ಹೊರ್ತು ಎಂದೂ ತಪ್ಪುವಂತಿಲ್ಲ’’

‘‘ಗುರುಗಳೇ, ಹೀಗಿದ್ದ ಮೇಲೆ ಈ ಪಾಪೀ ರಾಜ್ಯವನ್ನು ತ್ಯಾಗ ಮಾಡುವದೇ ಶ್ರೇಯಸ್ಕರವು ಅಂದರೆ ಅನಾಯಾಸವಾಗಿಯೇ ಸರ್ವ ದುಃಖಗಳು ನಾಶವಾಗುವವು’’

‘‘ಬೇಟಾ, ಸಂಸಾರದೊಳಗಿನ ಈ ಭಯಂಕರ ಆಧಿವ್ಯಾಧಿಗಳು ನಿನ್ನನ್ನು ಜ್ಞಾನಶೂನ್ಯನಾಗಮಾಡಿಬಿಟ್ಟವೆ. ನೀನು ನಿನ್ನ ಕರ್ತವ್ಯವನ್ನು ಸ್ಮರಿಸು’’

ಕರ್ತವ್ಯದ ನೆನಪಾದ ಕೂಡಲೆ ತ್ವೇಷದಿಂದ: ‘‘ನರಕ ಸಮಾನವಾದ ಆ ದುಷ್ಟ ನವಾಬನ ಮಹಾಲಿನೊಳಗಿಂದ ಮಾನಕುಮಾರಿಯು ಉದ್ಧಾರಮಾಡಲಿಕ್ಕೆ ನಾನು ಅಸಮರ್ಥನಾದರೆ, ನಿಶ್ಚಯವಾಗಿಯೂ ಪ್ರಾಣತ್ಯಾಗ ಮಾಡುವೆನು!’’

‘‘ಬೇಟಾ, ನೀನು ಸ್ವಲ್ಪಾದರೂ ಚಿಂತೆಯನ್ನು ಮಾಡಬೇಡ;

ಮೇಲೆ ಮಹತ್ಸಂಕಟವು ಬಂದಾಗಲೇ, ಅವರಲ್ಲಿಯ ಅಲೌಕಿಕ ಧೈರ್ಯವೂ, ಅತುಲ ಪರಾಕ್ರಮವೂ, ಅತ್ಯಗಾಧ ಶಾಂತಿಗುಣವೂ ಹೊರಬಿದ್ದು, ಅವರು ಇಂದಿಗೂ ಕೀರ್ತಿಯಿಂದ ಅಜರಾಮರರಾಗಿರುತ್ತಾರೆ! ಸಂಕಟವು ನಿರ್ಬಲರನ್ನು ಸಬಲರನ್ನಾಗೆ ಮಾಡುತ್ತದೆ, ಅಪ್ರಬುದ್ಧರನ್ನು ಪ್ರಬುದ್ಧರನ್ನಾಗೆ ಮಾಡುತ್ತದೆ, ಹೀನವೀರ್ಯರನ್ನು ಪರಾಕ್ರಮಿಗಳನ್ನಾಗೆ ಮಾಡುತ್ತದೆ, ಸುಷುಪ್ತರನ್ನು ಜಾಗರರನ್ನಾಗೆ ಮಾಡುತ್ತದೆ. ಈ ಸ್ವಕೀಯ ಬಾಲಿಕೆಯ-ಮಾನಕುಮಾರಿಯ-ಛಲನೆಯಿಂದಲೇ ದರ್ಶನಸಿಂಗನ ಸಂಕ್ಷೋಭವಾಗಿ, ಆ ಕಾಮಾಂಧ ಬಾದಶಹನ ಸಂಹಾರವಾಗುವದೆಂದು ನಿಶ್ಚಿತವಾಗಿ ನಂಬು"

"ಗುರುಗಳೇ, ದರ್ಶನಸಿಂಗನ ಹೆಂಡಿರು ಮಕ್ಕಳು ನಾಶವಾಗುವದೋ? ಪಾಪ, ಆ ನಿರಪರಾಧಿ ಸ್ತ್ರೀ-ಪುತ್ರರು ನಾಶವಾಗಬೇಕೆಂದು ನಾನು ಎಂದೂ ಇಚ್ಛಿಸಲಾರೆನು; ಆದರೆ ಆ ಚಾಂಡಾಲನಾದ ದರ್ಶನಸಿಂಗನಿಗೆ ಮಾತ್ರ ಶೀಘ್ರವಾಗಿ ಮರಣವು ಬರಲೆಂದು ನಾನು ಹಗಲಿರುಳು ಪರಮಾತ್ಮನ ಪ್ರಾರ್ಥನೆ ಮಾಡುತ್ತಿರುವೆನು. ಆ ದುಷ್ಟನ ಘೋರತರ ದುಷ್ಕರ್ಮದ ರಾಶಿಗಳಿಗಾಗಿಯೇ ಮಾನಕುಮಾರಿಯು ಇಂಥ ಸಂಕಟಕ್ಕೆ ಗುರಿಯಾಗಿರುವಳು. ಆ ಪಿಶಾಚಿಯ ಸಲುವಾಗಿಯೇ ರಾಜಪುತರು ಕುಲಸ್ತ್ರೀಯರು ತಮ್ಮ ಸತೀತ್ವದಿಂದ ಭ್ರಷ್ಟರಾಗಿರುವರು!!"

ಶಿಷ್ಯನ ತಳಮಳವನ್ನು ನೋಡಿ ಗುರುವು "ಬೇಟಾ, ಪ್ರಯತ್ನ ಮಾಡಿದರೆ ನೀನು ಆತನ ಹೆಂಡಿರು-ಮಕ್ಕಳನ್ನು ಪಾರುಮಾಡಲು ಶಕ್ತನಾಗುವಿ"

'ನಾನು ಹೇಗೆ ಸಮರ್ಥನಾಗುವೆನು? ನನ್ನ ಕೈಯಲ್ಲೇನಿದೆ?'

"ಯೋಗ್ಯಕಾಲಕ್ಕೆ ನಿನಗೆ ಸರ್ವವೂ ತಿಳಿಯುವದು. ನೀನು ಇನ್ನು ಮೇಲೆ ವಿಳಂಬ ಮಾಡದೆ ಅಯೋಧ್ಯೆಗೆ ಹೋಗು. ನಿನ್ನಿನ ದಿವಸ ಹೇಳಿದಂತೆ ನಿನ್ನ ವರ್ತನವನ್ನಿಡು. ಅಂದರೆ ನಿನ್ನ ಕಲ್ಯಾಣವಾಗುವದು."

"ಗುರುಗಳ ಈ ಶುಭಾಶೀರ್ವಾದವನ್ನು ಸ್ವೀಕರಿಸಿ ಆ ಶಿಷ್ಯನು ಅಲ್ಲಿಂದ ಹೊರಹೊರಟನು."

---

## ಅಂತು ಇಬ್ಬರೂ ಒಂದೇ!

ಅಯೋಧ್ಯಾ ಪ್ರಾಂತದಲ್ಲಿದ್ದ ಸೀತಾಪುರವೆಂಬಲ್ಲಿ ಜಗನ್ನಾಥ ಶಾಸ್ತ್ರಿಯೆಂಬ ಪ್ರಸಿದ್ಧ ಜಮೀನದಾರನಿರುತ್ತಿದ್ದನು ಆತನು ಸದಾಚಾರಿಯಾಗಿ ಸರ್ವದಾ ನಿತ್ಯ ಕರ್ಮಾನುಷ್ಠಾನದಲ್ಲಿಯೇ ಮಗ್ನನಾಗಿರುತ್ತಿದ್ದನು ಆತನಿಗೆ ಮೂವರು ಮಕ್ಕಳಿದ್ದರು ಆ ಮಕ್ಕಳಲ್ಲಿ ಹಿರಿಯರಾದ ಇಬ್ಬರು ಸುಶೀಲರಾಗಿ, ತಕ್ಕ ವ್ಯಾವಹಾರಿಕ ಶಿಕ್ಷಣ ಹೊಂದಿ, ತಂದೆಯ ಕಾರಭಾರದಲ್ಲಿ ಸಹಾಯಕರಾಗಿದ್ದರು ಮಕ್ಕಳು ಕಾರ್ಯ ದಕ್ಷರಾದುದನ್ನು ನೋಡಿ, ಜಗನ್ನಾಥಶಾಸ್ತ್ರಿಯು ನಿಶ್ಚಿಂತನಾಗಿರುತ್ತಿದ್ದನು

ಹೀಗಿರುತ್ತಿರಲು, ಅಯೋಧ್ಯೆಯ ವಜೀರನಾದ ಅಸಫುದ್ದೌಲನ ಆಡಳಿತೆಯಲ್ಲಿ ರೆಸಿಡೆಂಟನ ಪ್ರಶಂಶೆಯಿಂದ ಕರ್ನಲ್ ಹನನೆಂಬವನು ಕಂದಾಯವಸೂಲಾತಿಯ ಅಧಿಕಾರಿಯಾದನು ಕರ್ನಲ್ ಹನನು ಅತ್ಯಂತ ನಿಷ್ಠುರನೂ, ರಾಕ್ಷಸೀ ಸ್ವಭಾವದವನೂ, ಕ್ರೂರನೂ ಆಗಿದ್ದನು ಇವನು ಬಹು ಕಠೋರಶಾಸನದಿಂದ ಕಂದಾಯದ ವಸೂಲಿಯನ್ನು ನಡಿಸಿದನು ಹೊತ್ತಿಗೆ ಕಂದಾಯ ಕೊಡದವರನ್ನು ಅಮಾನುಷವಾಗಿ ದಂಡಿಸತೊಡಗಿದನು ಹೀಗೆ ಕಂದಾಯದ ವಸೂಲಿಯ ದಂಡನೆಯ ಸತ್ರದಲ್ಲಿ ಜಗನ್ನಾಥಶಾಸ್ತ್ರಿಯ ಇಬ್ಬರೂ ಮಕ್ಕಳು ಆಹುತಿಯಾದರು! ಅವರ ಇಬ್ಬರು ಹೆಂಡಂದಿರು ಸಹಗಮನ ಹೋದರು!

ಪುತ್ರಶೋಕವೆಂಬ ಅತ್ಯಸಹ್ಯವಾದ ವೇದನೆಯಿಂದ ಜಗನ್ನಾಥನ ವೃದ್ಧಪತ್ನಿಯು ಸ್ವಲ್ಪಾವಧಿಯಲ್ಲಿಯೇ ಇಹಲೋಕದ ಯಾತ್ರೆ ... ಮುಗಿಸಿದಳು ಇಂತು ಕೈಗೆ ಬಂದಂಥ ಇಬ್ಬರು ಪ್ರಬುದ್ಧ ...ಳೂ, ಪ್ರೀತಿಯ ಪತ್ನಿಯೂ, ತರುಣ ಸೊಸೆಯಂದಿರೂ ಅಕಾಲ ...ಸೀ ಅಂತಕನ ಸಾಮ್ರಾಜ್ಯವನ್ನು ಪ್ರವೇಶಿಸಿದ್ದರಿಂದ, ಜಗನ್ನಾಥ ...ಗೆ ಪರಮಾವಧಿಯ ದುಃಖವಾಯಿತು; ಆಕಾಶವೇ ಮೈ-...ಲೆ ಹರಕೊಂಡು ಬಿದ್ದಂತಾಯಿತು; ಮತ್ತು ಅದರಂತೆ ಸಂತಾ...ಪ ಹೆಚ್ಚಿತು. ಆದರೆ ಮಾಡುತ್ತಾನೇನು? ಆ ದುಃಖಸಂತಾ...ತಿರೇಕದಲ್ಲಿ ತನ್ನ ವಿಸ್ತೃತವಾದ ಮನೆ-ಮಾರುಗಳ ವ್ಯವಸ್ಥೆ...ಡುವದಕ್ಕೆ ಒಬ್ಬ ವಿಶ್ವಾಸಿಗನಾದ ಸೇವಕನಿಗೆ ಹೇಳಿ, ತಾನು

ಚಿಕ್ಕ ಮಗನಾದ ಗಂಗಾಪ್ರಸಾದನನ್ನೂ, ಆತನ ಪತ್ನಿಯಾದ ಭಾನು ಮತಿಯನ್ನೂ ಸಂಗಡ ಕರಕೊಂಡು ಕಾಶಿಗೆ ಹೊರಟುಹೋದನು.

ಜಗನ್ನಾಥಶಾಸ್ತ್ರಿಯು ಮೊದಲಿನಿಂದಲೇ ಅತ್ಯಂತ ಸದಾಚಾರಿಯೂ, ಧರ್ಮನಿಷ್ಠನೂ ಇದ್ದನೆಂದು ಮೇಲೆ ಹೇಳಿರುವದಷ್ಟೇ? ಸಂಸಾರಸಾಗರದಲ್ಲಿಯ ಘೋರ ದುಃಖಗಳಿಂದ ಪೀಡಿಸಲ್ಪಟ್ಟಿದ್ದ ಆತನು, ಈಗಂತೂ ವೈರಾಗ್ಯದ ಮೂರ್ತಿಯಾಗಿದ್ದನೆಂದು ಹೇಳಬಹುದು. ಅವನು ಕಾಶಿಯ ನಿವಾಸಿಯಾದಂದಿನಿಂದಂತೂ ತನ್ನ ಎಲ್ಲ ವೇಳೆಯನ್ನು ವಿರಕ್ತರಾದ ಸಾಧು-ಸಂನ್ಯಾಸಿ-ಬೈರಾಗಿಗಳ ಸಂಗತಿಗಳಲ್ಲಿಯೇ ಕಳೆಯುತ್ತಿದ್ದನು. ಸೀತಾಪುರದಲ್ಲಿರುವಾಗ ಮಕ್ಕಳು ದೊಡ್ಡವರಾಗಿದ್ದರೂ ಕೂಡ ಆತನ ಅಲ್ಪ ಸ್ವಲ್ಪ ಕಾಲವು ಹೊಲ-ಮನೆಗಳ ಕಡೆಗೂ, ಕೊಡ-ತೆಗೆದುಕೊಳ್ಳುವದರ ಕಡೆಗೂ ವ್ಯಯವಾಗುತ್ತಿತ್ತು; ಆದರೆ ಕಾಶಿಯಲ್ಲಿ ಆ ಮಹಾಪುರುಷನಿಗೆ ಸಾಧುಸವಾಗಮ, ಬ್ರಹ್ಮಚಿಂತನಪರಗ್ರಂಥಗಳ ಅವಲೋಕನ ಇವುಗಳ ಹೊರ್ತು ಅನ್ಯ ಕೆಲಸಗಳೇ ಇದ್ದಿಲ್ಲವೆಂದು ಹೇಳಬಹುದು. ಸೀತಾಪುರದಿಂದ ಬರುವ ಮುಂದೆ ತಂದ ವಿಪುಲ ಧನವನ್ನು ಆತನು ಪರೋಪಕಾರದ ಕೆಲಸಕ್ಕಾಗಿಯೂ ಮತ್ತು ಲೋಕಕಲ್ಯಾಣಕ್ಕಾಗಿಯೂ ಕೈಸಡಿಲು ಬಿಟ್ಟು ವೆಚ್ಚಮಾಡುತ್ತಿದ್ದನು. ಜಗನ್ನಾಥ ಶಾಸ್ತ್ರಿಯ ಮನೆಯು ಬಹುತರ ಸಾಧು-ಸಂನ್ಯಾಸಿಗಳಿಂದಲೂ, ಯೋಗಿ-ಬೈರಾಗಿಗಳಿಂದಲೂ ಸದಾ ತುಂಬಿ ತುಳುಕುತ್ತಿತ್ತು!

ಹಿಬ್ಬಳೇ ಹಿಬ್ಬ ಸೊಸೆಯಾದ ಭಾನುಮತಿಯ ಮೇಲೆ ಜಗನ್ನಾಥಶಾಸ್ತ್ರಿಯು ಅತ್ಯಂತ ಪ್ರೇಮವನ್ನು ಮಾಡುತ್ತಿದ್ದನು. ಭಾನುಮತಿಯಾದರೂ ಮರಮಪೂಜ್ಯ ಮಾವನನ್ನೂ, ಆತನು ಮನೆಗೆ ಕರಕೊಂಡು ಬಂದಂಥ ಸಾಧು-ಸಂತರನ್ನೂ ಅತ್ಯಂತ ನಿಷ್ಠೆಯಿಂದ ಸೇವಿಸುತ್ತಿದ್ದಳು. ಎಷ್ಟೇ ಶ್ರಮವಾಗಲಿ, ಕಷ್ಟವಾಗಲಿ ಭಾನುಮತಿಯು ಯಾವಾಗಲೂ ಪ್ರಸನ್ನ ಚಿತ್ತದಿಂದ ಇರುತ್ತಿದ್ದಳು. ಮಾವನ ಸಲುವಾಗಿ ಕಷ್ಟ ಸಹಿಸುವದರಲ್ಲಿಯೇ ಆ ಸಾಧ್ವಿಯು ಆನಂದಪಡುತ್ತಿದ್ದಳು. ಅವಳು ಪ್ರತಿಯೊಂದು ಕೆಲಸದಲ್ಲಿ ಪರರಿಗೆ ಸುಖವನ್ನು ಕೊಡಬೇಕೆಂದು ಶಕ್ತಿಮೀರಿ ಪ್ರಯತ್ನಿಸುತ್ತಿದ್ದಳು. ಆ ಲಲನಾಮಣಿಯು ತನ್ನ ಸ್ವಂತದ ಸುಖ-ದುಃಖಗಳ ಕಡೆಗೂ ಅರಿವೆ-

ಅಂಚಡಿಗಳ ಕಡೆಗೆ ಇಷ್ಟೇ ಇಲ್ಲ, ತಿನ್ನುಣ್ಣುವದರ ಕಡೆಗೂ ಕಿಂಚಿನ್ಮಾತ್ರವೂ ಲಕ್ಷ್ಯಗೊಡುತ್ತಿದ್ದಿಲ್ಲ. ಪ್ರಿಯ ಪತಿಯು ಮತ್ತು ಪರಮ ಪೂಜ್ಯ ಮಾವನ ಶುಶ್ರೂಷೆಯನ್ನು ಹೇಗೆ ಮಾಡಬೇಕು, ಸಾಧು-ಸಂತರ ಚಿತ್ತವನ್ನು ಹೇಗೆ ಸಂತೈಸಬೇಕು ಮತ್ತು ಅತಿಥಿಗಳಿಗೆ ಹೇಗೆ ಸುಖವನ್ನು ಕೊಡಬೇಕು, ಎಂಬಿವೇ ಮೊದಲಾದ ವಿಚಾರಗಳನ್ನು ಅವಳು ಚಿಂತಿಸುತ್ತಿದ್ದಳೆಂದು ಹೇಳಬಹುದು. ಇಂಥ ಪರಮ ಸಾಧ್ವೀಮಣಿಯು ಅರ್ಧಾಂಗಿಯಾದ್ದರಿಂದ ಗಂಗಾಪ್ರಸಾದನೂ, ಸೊಸೆಯಾದ್ದರಿಂದ ಜಗನ್ನಾಥಶಾಸ್ತ್ರಿಯೂ ಧನ್ಯರೇ ಸರಿ! ವಾಚಕವೃಂದ, ಯಾವದೊಂದು ಮನೆತನವು ಅವನತಿ ಅಥವಾ ಉನ್ನತಿ ಹೊಂದಬೇಕಾದರೆ ಮುಖ್ಯವಾಗಿ ಅದು ಸ್ತ್ರೀಯರನ್ನು ಅವಲಂಬಿಸಿರುವದಷ್ಟೇ? ಸ್ತ್ರೀಯು ಸತೀ ಧರ್ಮವನ್ನು ಕಾಯ್ದುಕೊಂಡರೆ ಕುಲಕೋಟಿಯನ್ನುದ್ಧರಿಸಬಲ್ಲಳೆಂದೂ, ದುರಾಚಾರಿಣಿಯಾದರೆ ಕುಲದ್ವಯಗಳನ್ನೂ ಅಧಃಪತನಕ್ಕೆ ಒಯ್ಯುವಳೆಂದೂ ಅನ್ನುವರಲ್ಲವೆ?

ಹೀಗೆ ಸದ್ಗುಣಮಂಡಿತೆಯಾದ ಭಾನುಮತಿಯು ಸೊಸೆಯಾದ್ದರಿಂದ ತನ್ನನ್ನು ಧನ್ಯನೆಂದು ತಿಳಕೊಂಡ ಜಗನ್ನಾಥಶಾಸ್ತ್ರಿಯು ಪರಮಾಲ್ಹಾದವನ್ನು ಪಡೆಯುತ್ತಿದ್ದನು. ತಂದೆಯು ವರ್ತನವು ಗಂಗಾಪ್ರಸಾದನಿಗೆ ಮಾತ್ರ ವಿಶೇಷವಾಗಿ ಸೇರುತ್ತಿದ್ದಿಲ್ಲ. ಒಮ್ಮೊಮ್ಮೆ ತಂದೆ-ಮಕ್ಕಳ ನಡುವೆ ಇದರ ಬಗ್ಗೆ ವಾದ-ವಿವಾದವೂ ಆಗುತ್ತಿತ್ತು. ಭಾನುಮತಿಗೆ ಈ ಸಾಧು-ಬೈರಾಗಿಗಳ ಶುಶ್ರೂಷೆಯನ್ನು ಮಾಡಬೇಕಾದರೆ ಬಹಳ ಶ್ರಮವಾಗುತ್ತಿತ್ತು. ಪ್ರಸಂಗವಶಾತ್ ಒಮ್ಮೊಮ್ಮೆ ಸೂರ್ಯಾಸ್ತದ ವರೆಗೂ ಒಂದು ಸೌಟು ನೀರು ಕುಡಿಯಲಿಕ್ಕೆ ಸಹ ಅನುವು ದೊರೆಯುತ್ತಿರಲಿಲ್ಲ; ಆದರೂ ಕೂಡ ಆ ಸಾಧ್ವಿಯು ಪರಮಾಂತಃಕರಣದಿಂದಲೂ, ನಿಷ್ಠೆಯಿಂದಲೂ ಕೆಲಸದಲ್ಲಿ ತತ್ಪರಳಾಗುತ್ತಿದ್ದಳು; ಆದರೆ ಪತ್ನಿಯ ಈ ವರ್ತನವು ಗಂಗಾಪ್ರಸಾದನ ಮನಸ್ಸಿಗೆ ಬರುತ್ತಿದ್ದಿಲ್ಲ. ಅವನು ಒಮ್ಮೊಮ್ಮೆ ಹೆಂಡತಿಯ ಮೇಲೆ ಸಿಟ್ಟಿಗೇಳುತ್ತಿದ್ದನು; ಮತ್ತು ತಂದೆಗೂ ದೋಷಕೊಡುತ್ತಿದ್ದನು. ಇದರ ಮೇಲಿಂದ ಗಂಗಾಪ್ರಸಾದನ ಸ್ವಭಾವವು ಹೀನಸ್ಥಿತಿಯದಿತ್ತೆಂದು ತಿಳಿಯುವದು. ಅವನು ದುಶ್ಚರಿತನಾಗಿರದಿದ್ದರೂ, ಸಾಧು-ಸಂತರ ವಿಷಯದಲ್ಲಿ ಅವನ ಮನಸ್ಸಿನಲ್ಲಿ ಪ್ರೇಮವಿರ

ಲಿಲ್ಲ. ಒಂದು ದಿವಸ ಅವನು ತಂದೆಗೆ: "ತಾವು ಹೀಗೆ ಈ ಕಪಟ ಸಾಧು-ಬೈರಾಗಿಗಳ ಸಲುವಾಗಿ ಮನೆ-ಮಾರು ಹಾಳುಮಾಡಲಾರಂಭಿಸಿರುವದು ಒಳಿತಲ್ಲ ನನಗೆ ತಮ್ಮ ಈ ವರ್ತನವು ಎಷ್ಟು ಮಾತ್ರವೂ ಸರಿ ಬರುವದಿಲ್ಲ!" ಎಂದು ಸ್ಪಷ್ಟವಾಗಿ ಹೇಳಿಬಿಟ್ಟನು.

ನಿಜವಾಗಿ ನೋಡಿದರೆ, ಜಗನ್ನಾಥ ಶಾಸ್ತ್ರಿಯ ಮನೆಯಲ್ಲಿ ಸಮೀಚೀನವಾದ ಗ್ರಾಸವನ್ನು ಯಥೇಚ್ಛವಾಗಿ ಸೇವಿಸತಕ್ಕವರಲ್ಲಿ ಸ್ವಲ್ಪ ಜನರು ಮಾತ್ರ ಸತ್ಪುರುಷರಿರಬಹುದು ಮಿಕ್ಕವರು "ಉದರ ನಿಮಿತ್ತಂ ಬಹುಕೃತ ವೇಷಃ...." ಎಂಬಂತೆ, ಕೇವಲ ಹೊಟ್ಟೆ ಹೊರಕೊಳ್ಳುವ ಸಲುವಾಗಿ ಸಾಧು ವೇಷವನ್ನು ಧರಿಸಿದವರಾಗಿದ್ದರು. ಜಗನ್ನಾಥ ಶಾಸ್ತ್ರಿಯು ಅತ್ಯಂತ ಧರ್ಮಭೋಳೆ ಸ್ವಭಾವದವನಾದ್ದರಿಂದ, ಮನೆಗೆ ಬಂದ ಯಾಚಕರನ್ನು ವಿಮುಖರನ್ನಾಗಿ ಎಂದೂ ಕಳುಹುತ್ತಿದ್ದಿಲ್ಲ ಅವನ ಈ ಸಾಧುಪ್ರವೃತ್ತಿಯ ಲಾಭವನ್ನು ಹಲವರು ತಕ್ಕರು ಪಡೆಯದೆ ಇರಲಿಲ್ಲ. ಈ ಸಂಗತಿಯು ಗಂಗಾಪ್ರಸಾದನಿಗೆ ಸೇರುತ್ತಿದ್ದಿಲ್ಲ ಮಗನ ಸಂಗಡ ವಾದ-ವಿವಾದ ಮಾಡುತ್ತ ಕೂಡ್ರುವದು ಜಗನ್ನಾಥ ಶಾಸ್ತ್ರಿಗೆ ಪ್ರಶಸ್ತವೆನಿಸಲಿಲ್ಲ. ಆದ್ದರಿಂದ ಆತನು ಸಂಸಾರದಿಂದ ಮುಕ್ತನಾಗಿ, ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಬೇಕೆಂಬ ಯೋಚನೆಯನ್ನು ಮಾಡಿದನು. ಭಾನುಮತಿಗೆ ಮಾವನ ಈ ಮನೋದಯವು ತಿಳಿದ ಕೂಡಲೆ, ಆ ಸರಳ ಹೃದಯ ತರುಣಿಯು ಶೋಕಾಕ್ರಾಂತಳಾದಳು. ಸೊಸೆಯ ಇಚ್ಛೆಯನ್ನು ಮೀರಿ ಕಾಶಿಯನ್ನು ಬಿಟ್ಟು ಹೋಗುವದು ಜಗನ್ನಾಥ ಶಾಸ್ತ್ರಿಯ ಕೈಯಿಂದ ಆಗದ್ದರಿಂದಲೇ ಆತನು ಇನ್ನೂ ವರೆಗೆ ಸಂಸಾರದಲ್ಲಿದ್ದನು.

ಇ. ಸನ್ ೧೭೯೭ರಲ್ಲಿ ಅಯೋಧ್ಯೆಯ ನವಾಬನಾದ ಅಸಫ ಉದ್ದೌಲನು ತೀರಿದ ಬಳಿಕ, ಅವನ ತಮ್ಮನಾದ ಸಾದತ ಅಲ್ಲಿಯು ಇಂಗ್ಲಿಷರ ಕೃಪಾಪ್ರಸಾದದಿಂದ ಅಯೋಧ್ಯಾಪತಿಯಾದನು. ಈ ಸಾದತ ಅಲ್ಲಿಯು ಕೆಲದಿನಗಳ ಹಿಂದೆ ಕಾಶಿಯಲ್ಲಿ ಬಂದೀವಾಸದಲ್ಲಿದ್ದನು ಆಗ ಆತನಿಗೂ ಗಂಗಾಪ್ರಸಾದನಿಗೂ ಗೆಳೆತನವು ಕೂಡಿತ್ತು. ಗಂಗಾಪ್ರಸಾದನು ಮೊದಲಿಂದ ಮೇಲೆ ಸಾದತಅಲ್ಲಿಗೆ ಸಾಲಕೊಡುತ್ತಿದ್ದನು. ಸಾಂಪ್ರತಕಾಲದಲ್ಲಿ ತನ್ನ ಮಿತ್ರನಾದ ಸಾದತ ಅಲ್ಲಿಯು ಅಯೋಧ್ಯಾಪತಿಯಾಗಿರುವದರಿಂದ, ಪುನಃ ಸಪರಿವಾರ

ಸೀತಾಪುರಕ್ಕೆ ಹೋಗಬೇಕೆಂದು ಗಂಗಾಪ್ರಸಾದನು ತಂದೆಗೆ ಅಗ್ರಹ ಮಾಡತೊಡಗಿದನು; ಆದರೆ ಮಗನ ಮಾತು ತಂದೆಯ ಮನಸ್ಸಿಗೆ ಎಷ್ಟು ಮಾತ್ರವೂ ಬರಲಿಲ್ಲ. ಆತನು ಗಂಗಾಪ್ರಸಾದನನ್ನು ಕುರಿತು:—"ನನಗೆ ಇದು ಸರಿದೋರುವದಿಲ್ಲ ಯಾರು ಅಧಿಪತಿಗ ಳಾದರೂ ಅಯೋಧ್ಯಾಪ್ರಾಂತವಾಸಿಗಳ ದುಃಖವು ಕುಗ್ಗಲಾರದು." ಎಂದು ನುಡಿದನು.

"ಸಾದತಅಲ್ಲಿಯು . ಒಳ್ಳೇ ನಡತೆಯ ನಬಾಬನಿರುವನು. ಅವನ ಆಳಿಕೆಯಲ್ಲಿ ಪ್ರಜೆಗಳ ಮೇಲೆ ಜುಲುಮೆಯಾಗುವ ಸಂಭವ ವಿಲ್ಲ ಮೇಲಾಗಿ ಅವನು ನನ್ನ ಮಿತ್ರನಿರುವನು. ನಾವು ಸ್ವದೇ ಶಕ್ಕೆ ಹೋದರೆ, ನಿಶ್ಚಯವಾಗಿ ನಮ್ಮ ಭಾಗ್ಯಕಾಲವು ಪ್ರಾಪ್ತವಾ ಗುವದು." ಎಂದು ಗಂಗಾಪ್ರಸಾದನು ತಂದೆಗೆ ನಾನಾ ಪ್ರಕಾರ ದಿಂದ ಹೇಳಿ ನೋಡಿದನು; ಆದರೆ ವಿಚಾರಿಯಾದ ಜಗನ್ನಾಥ ಶಾಸ್ತ್ರಿಯ ಮನಸ್ಸು ಒಡಂಬಡಲಿಲ್ಲ ಗಂಗಾಪ್ರಸಾದನಂತೂ ಸೀತಾ ಪುರಕ್ಕೆ ಹೋಗಬೇಕೆಂಬ ಹಟವನ್ನೇ ತೊಟ್ಟನು. ಜಗನ್ನಾಥ ಶಾಸ್ತ್ರಿಯು ಮಗನ ಇಚ್ಛೆಯನ್ನು ತಿರುಗಿಸಬೇಕೆಂದು ಪರಿಪರಿಯಾಗಿ ಹೇಳಿ ನೋಡಿದನು; ಆದರೆ ಎಲ್ಲವೂ ವ್ಯರ್ಥ! ಗಂಗಾಪ್ರಸಾದನು ಸಕುಟುಂಬವಾಗಿ ಸೀತಾಪುರಕ್ಕೆ ಹೊರಡಲನುವಾದನು.

ಕಾಶಿಯಲ್ಲಿ ಇರಹತ್ತಿದ ಬಳಿಕ ಭಾನುಮತಿಗೆ ಒಂದು ಮಗುವು ಹುಟ್ಟಿದ್ದು, ಈಗ ಆ ಕೂಸು ಎರಡು ವರುಷದ್ದಾಗಿತ್ತು ಕಾಶಿಯ ಲ್ಲಿಯೇ ಜನ್ಮ ತಾಳಿದ ಮೊಮ್ಮಗನ ಹೆಸರನ್ನು ಜಗನ್ನಾಥಶಾಸ್ತ್ರಿ ಯು ಕಾಶಿನಾಥನೆಂದು ಇಟ್ಟಿದ್ದನ . ತಾಯಿಯು ಮನೆಗೆಲಸದಲ್ಲಿ ತೊಡಗಿರುವದರಿಂದ, ಕಾಶಿನಾಥನು ಸರ್ವಕಾಲದಲ್ಲಿಯೂ ಅಜ್ಜನ ಹತ್ತರವೇ ಇರುತ್ತಿದ್ದನು. ಭಾನುಮತಿಯು ಗಂಡ-ಮಾವಂದಿರ ಹಟವನ್ನು ನೋಡಿ, ಬಹು ಪೇಚಿನಲ್ಲಿ ಬಿದ್ದಿದ್ದಳು. ಇತ್ತ ಗಂಡ ನಂತೂ ಸೀತಾಪುರಕ್ಕೆ ಹೋಗುವ ನಿಶ್ಚಯ ಮಾಡಿಬಿಟ್ಟಿದ್ದನು. ತ್ತ ಮಾವನು ಏನು ಮಾಡಿದರೂ ಸೀತಾಪುರಕ್ಕೆ ಬರಲು ಸಮ್ಮ ತಿಲೊಲ್ಲನು! ಇತ್ತ ಪೂಜ್ಯ ಮಾವನನ್ನು ಬಿಟ್ಟು ಹೋಗುವದೂ ಕಷ್ಟ. ಅತ್ತ ಗಂಡನ ಆಜ್ಞೆಯನ್ನು ಮೀರುವದೂ ಕಷ್ಟ. ಇತ್ತ ದ್ದರೆ ಬಾವಿ, ಅತ್ತ ಬಿದ್ದರೆ ಕೆರೆ, ಎಂಬಂತೆ ಆ ಸಾಧ್ವಿಯ ಸ್ಥಿತಿ

ಯಾಗಿತ್ತು! ಪರಮಪೂಜ್ಯ ಶ್ವಶುರನನ್ನು ಬಿಟ್ಟು ಹೋಗುವದಂತೂ ಆ ಸಾಧ್ವಿಯ ಮನಸ್ಸಿಗ ಸರಿಬರಲೊಲ್ಲದು ಕಡೆಗೆ ಭಾನು ಮತಿಯು ಕಾಶಿನಾಥನನ್ನು ಮಾವನ ತೊಡೆಯ ಮೇಲೆ ಕೂಡ್ರಿಸಿ, ತಾನು ಆತನ ಚರಣಗಳನ್ನು ಗಟ್ಟಿಯಾಗಿ ಹಿಡಿದು ಅಳುತ್ತ:— "ತಾವು ನಮ್ಮನ್ನು ನಿರಾಕರಿಸಬೇಡಿರಿ! ಕೂಸು ತಮ್ಮ ಹೊರತು ಒಂದು ಗಳಿಗೆ ಸಹ ಇರುವದಿಲ್ಲ ಆದ್ದರಿಂದ ತಾವು ಈ ಬಾಲಕನ ಸಲುವಾಗಿಯಾದರೂ ಸೀತಾಪುರಕ್ಕೆ ಬರಲಿಕ್ಕೇ ಬೇಕು." ಎಂದಳು.

ಸೊಸೆಯ ಈ ವಿನಂತಿಯನ್ನು ಕೇಳಿ, ಜಗನ್ನಾಥಶಾಸ್ತ್ರಿಯ ಮನವು ಕರಗುವ ಹವಣಿಕೆಯಲ್ಲಿತ್ತು. ಆತನು ಒಮ್ಮೆ ತೊಡೆಯ ಮೇಲೆ ಕುಳಿತಿರುವ ಮುದ್ದು ಬಾಲಕನ ಮುಖದ ಕಡೆಗೂ, ಮತ್ತೊಮ್ಮೆ ದೀನವಾಣಿಯಿಂದ ಪ್ರಾರ್ಥಿಸುತ್ತಿರುವ ಸೊಸೆಯ ಮುಖದ ಕಡೆಗೂ ನೋಡುತ್ತ, ಕೆಲಹೊತ್ತು ಮೌನದಿಂದ ಕುಳಿತನು; ಆದರೆ ಅಷ್ಟರಲ್ಲಿ ಆತ್ಮಿಕ ಉನ್ನತಿಯಿಂದ ಪ್ರಗಲ್ಭವಾದ ಆತನ ವಿವೇಕ ಶಕ್ತಿಯು ಪ್ರಬಲವಾಗಲು, ಮೋಹಪಾಶದಲ್ಲಿ ಬೀಳುತ್ತಿದ್ದ ಮನಸ್ಸನ್ನು ಆತ ಹಿಂಗಿಸಿಕೊಂಡನು. ಸಂಸಾರದ ಮಾಯೆಯನ್ನು ಪರಿತ್ಯಜಿಸಲಿಕ್ಕೆ ಮೊದಲೇ ಸಮರ್ಥನಾಗಿದ್ದ ಆತನು, ಪ್ರಿಯ ಸೊಸೆಗೆ ಪರಿಪರಿ ಯಿಂದ ಉಪದೇಶ ಮಾಡಿ, ಸಂಸಾರದಿಂದ ಮುಕ್ತನಾಗುವ ದೃಢ ನಿಶ್ಚಯವನ್ನು ಮಾಡಿದನು. ಮುಂದೆ ಸ್ವಲ್ಪ ದಿವಸಗಳಲ್ಲಿಯೇ ಗಂಗಾಪ್ರಸಾದನು ಭಾನುಮತಿಯನ್ನು, ಕಾಶೀನಾಥನನ್ನೂ ಕರ ಕೊಂಡು ಸೀತಾಪುರಕ್ಕೆ ಹೋದನು. ಇತ್ತ ವೃದ್ಧ ಜಗನ್ನಾಥ ಶಾಸ್ತ್ರಿಯು ಕಾಶೀವಿಶ್ವೇಶ್ವರನಿಗೆ ಪೊಡಮಟ್ಟು, ಸಾಧು-ಸಂನ್ಯಾಸಿಗಳ ಆಶ್ರಯಸ್ಥಾನವಾದ ಹಿಮಾಲಯದ ಮಾರ್ಗವನ್ನು ಹಿಡಿದನು! ಮುಂದೆ ಜಗನ್ನಾಥನು ತನ್ನ ಮಗನಿಗೆ ಅಥವಾ ಸೊಸೆಗೆ ಪುನಃ ಎಂದೂ ಭೆಟ್ಟಿಯಾಗಲಿಲ್ಲ. ನಮ್ಮ ಕಥಾನಕದ ಕಾಲದಲ್ಲಿ ಆ ಮಹಾತ್ಮನು ಪೃಥ್ವಿಯ ಮೇಲೆ ಇದ್ದನೋ ಅಥವಾ ಜೀವನ್ಮುಕ್ತ ನಾಗಿದ್ದನೋ ಎಂಬುದು ಯಾರಿಗೂ ಗೊತ್ತಾಗುವಂತಿರಲಿಲ್ಲ

ಗಂಗಾಪ್ರಸಾದನು ತನ್ನ ಹೆಂಡಿರು-ಮಕ್ಕಳೊಡನೆ ಸೀತಾ ಪುರಕ್ಕೆ ಹೋಗಿ, ಹಿರಿಯರು ಗಳಿಸಿಟ್ಟ ಹೊಲ-ಮನೆಗಳ ವ್ಯವಸ್ಥೆ ಯನ್ನು ಮಾಡಲಾರಂಭಿಸಿದನು; ಮತ್ತು ಸೀತಾಪುರಕ್ಕೆ ಬಂದ

ಮೇಲೆ ಎರಡು ಮೂರು ಸಾರೆ ಲಖನೌಗೆ ಹೋಗಿ, ನಬಾಬ ಸಾದತ ಅಲ್ಲಿಗೆ ಭೆಟ್ಟಿಯಾಗಿ ಬಂದನು. ಸಾದತಅಲ್ಲಿಯು ಕಾಶಿಯಲ್ಲಿದ್ದ ಕಾಲಕ್ಕೆ ಗಂಗಾಪ್ರಸಾದನಿಂದ ಉಪಕೃತನಾಗಿದ್ದನೆಂದು ಹಿಂದೆ ಹೇಳಿದೆಯಷ್ಟೇ? ಆದ್ದರಿಂದ ಆತನು ಮೊದಲಿನ ಉಪಕಾರವನ್ನು ಸ್ಮರಿಸಿ, ಕೃತಜ್ಞತೆಯಿಂದ ಗಂಗಾಪ್ರಸಾದನನ್ನು ಸತ್ಕರಿಸಿ, ಆತನ ಇನಾಮುನನ್ನೂ, ಜಹಾಗೀರನ್ನೂ ಹತ್ತುಪಟ್ಟು ಬೆಳಿಸಿದನು; ಮತ್ತು ಅವನ ಅಧಿಕಾರವನ್ನೂ ಹೆಚ್ಚಿಸಿದನು.

ಕೆಲವು ವರ್ಷಗಳ ವರೆಗೆ ಗಂಗಾಪ್ರಸಾದನು ತನ್ನ ಜಹಗೀರಿಯ ಉಪಭೋಗವನ್ನು ನಿರ್ವಿಘ್ನದಿಂದ ಮಾಡುತ್ತಿರಲು, ಆತನಿಗೆ ಮೂರು ಕನ್ಯಾರತ್ನಗಳು ಜನಿಸಿದವು. ಹಿರಿಯ ಮಗಳ ಹೆಸರನ್ನು ನಾರಾಯಣಕುಮಾರಿಯೆಂದೂ, ನಡುವಿನವಳಿಗೆ ಚಾಂದಕುಮಾರಿಯೆಂದೂ, ಚಿಕ್ಕವಳಿಗೆ ಮಾನಕುಮಾರಿಯೆಂದೂ ಇಟ್ಟಿದ್ದನು. ನಾರಾಯಣಕುಮಾರಿಯು ಹತ್ತು-ಹನ್ನೊಂದು ವರುಷದವಳಿದ್ದ ಕಾಲಕ್ಕೆ, ಸೀತಾಪುರದಲ್ಲಿಯ ಪ್ರಸಿದ್ಧ ಜಮೀನದಾರನಾದ ಮಹಾರಾಜಾ ದಿಗ್ವಿಜಯಸಿಂಹ ಎಂಬವನಿಗೆ ಕೊಟ್ಟು ಲಗ್ನ ಮಾಡಿದನು. ವಿವಾಹವು ಅತಿಶಯ ಸಮಾರಂಭದಿಂದ ಜರುಗಿತು. ಮುಂದೆ ಎರಡು ವರುಷಗಳಲ್ಲಿಯೇ ಎರಡನೆಯ ಮಗಳಾದ ಚಾಂದಕುಮಾರಿಯೂ ವಿವಾಹಕ್ಕೆ ಯೋಗ್ಯಳಾದಳು. ಗಂಗಾಪ್ರಸಾದನು ಅವಳನ್ನು ತನ್ನ ಯೋಗ್ಯತೆಗೆ ತಕ್ಕ ಜಮೀನದಾರನಾದ ರಾಜಾ ಹರಪಾಲಸಿಂಹ ಎಂಬಾತನಿಗೆ ಕೊಟ್ಟು ವಿವಾಹವನ್ನು ಜರುಗಿಸಿದನು. ಇನ್ನು ಮೇಲೆ ಚಿಕ್ಕವಳಾದ ಮಾನಕುಮಾರಿಗೆ ತಕ್ಕ ವರನನ್ನು ಹುಡುಕುವದೊಂದು ಕೆಲಸವೂ, ಅದರಂತೆ ಕಾಶೀನಾಥನಿಗೆ ಯೋಗ್ಯ ವಧುವನ್ನು ಆರಿಸುವ ಕೆಲಸವೂ, ಗಂಗಾಪ್ರಸಾದನಿಗೆ ಉಳಿದವು. ಅವರಿಬ್ಬರ ವಿವಾಹವನ್ನು ಒಮ್ಮೆಲೆ ಅತ್ಯಂತ ವೈಭವದಿಂದ ಮಾಡಿ, ತಾನು ಕೃತಕೃತ್ಯನಾಗಬೇಕೆಂದು ಮಾಡಿದ್ದನು; ಮತ್ತು ಆ ಅಣ್ಣ-ತಂಗಿಯರಿಗೆ ಯೋಗ್ಯ-ವರರನ್ನು ಹುಡುಕುವ ಪ್ರಯತ್ನವನ್ನು ನಡೆಸಿದ್ದನು; ಆದರೆ ಮನುಷ್ಯನು ಯೋಚಿಸಿದ ಎಲ್ಲ ಸಂಗತಿಗಳೂ ಕೈಗೂಡುತ್ತಿರುವದಿಲ್ಲ. ಹಾಗಾದರೆ ಜಗತ್ತಿನಲ್ಲಿ ದುಃಖವೆಂಬುದೇ ಇರುತ್ತಿದ್ದಿಲ್ಲ.

ಕಾಶೀನಾಥನ ಸ್ವಭಾವವು ಆತನ ಅಜ್ಜನಂತೆಯೇ ಇತ್ತು.

ರೂಪದಲ್ಲಿಯೂ, ನಡೆ-ನುಡಿಗಳಲ್ಲಿಯೂ, ಸ್ವಭಾವಗಳಲ್ಲಿಯೂ ಆತನು ಅಜ್ಜನನ್ನು ಅಚ್ಚಳಿಯದೆ ಹೋಲುತ್ತಿದ್ದು, ಚಿಕ್ಕಂದಿನಿಂದಲೇ ಶಾಂತಿ ಸ್ವಭಾವಿಯೂ, ನಿರಪೇಕ್ಷಿಯೂ, ಸುವಿಚಾರಿಯೂ ಆಗಿದ್ದನು. ಪರೋಪಕಾರ ಮಾಡುವದರಲ್ಲಿಯೇ ಆತನು ಸದಾ ಸರ್ವದಾ ತತ್ಪರನಾಗಿದ್ದನು. ತನ್ನ ಅರಿವೆ-ಅಂಚಡಿ, ಹಾಸಿಗೆ-ಹೊದ್ದಿಗೆ, ಹಸಿವೆ-ನೀರಡಿಕೆ ಮುಂತಾದ ಸ್ವಸುಖದ ಕಡೆಗೂ, ಸ್ವಕಲ್ಯಾಣದ ಕಡೆಗೂ ಆತನ ಲಕ್ಷ್ಯವು ತಿಲಮಾತ್ರವಾದರೂ ಇದ್ದಿದ್ದಿಲ್ಲ. ವಿಷಯ ಸುಖವು ಮೃಗಜಲವತ್ ಎಂಬ ಪೂರ್ಣ ನಂಬುಗೆಯುಳ್ಳ ಸಾಧುಗಳು ಆಚರಿಸುವಂತೆ, ಕಾಶೀನಾಥನು ತನ್ನ ಪ್ರತಿಯೊಂದು ವ್ಯವಹಾರವನ್ನಿಟ್ಟಿದ್ದನು! ತನ್ನ ವಿವಾಹದ ಬಗ್ಗೆ ವಿಚಾರಗಳು-ಮಾತು-ಕಥೆಗಳು ನಡೆದಿರುವವೆಂಬು ತಿಳಿದ ಕೂಡಲೆ, ವಿವಾಹ ಮಾಡಿಕೊಳ್ಳುವದಕ್ಕೆ ತನ್ನ ಸಮ್ಮತಿಯಿಲ್ಲೆಂದು ಆತನು ತಾಯಿಯ ಮುಂದೆ ಸ್ಪಷ್ಟವಾಗಿ ಹೇಳಿಬಿಟ್ಟನು; ಮತ್ತು ಇಷ್ಟಾದರೂ ನೀವು ನನ್ನ ಸಮ್ಮತಿಯಿಲ್ಲದೆ ಬಲುಮೆಯಿಂದ ಮದುವೆ ಮಾಡುವದನ್ನೇ ನಿಶ್ಚಯಿಸಿದರೆ, ನಾನು ಮನೆಬಿಟ್ಟು ಓಡಿ ಹೋಗುವೆನು, ಎಂದು ಸಹ ತಿಳಿಸಿದನು. ಇಗ್ಗೊಬ್ಬ ಮಗನು ಸಂಸಾರದ ಬಗ್ಗೆ ಪ್ರಕಟಿಸಿದ ಈ ಅನಾದರವನ್ನು ನೋಡಿ, ಭಾನುಮತಿಗೆ ಬಹು ವಿಷಾದವೆನಿಸಿತು. ಮಗನ ಮದುವೆಯನ್ನು ಅತ್ಯಂತ ವೈಭವದಿಂದ ಮಾಡಿ, ಮಗನ ಪ್ರಪಂಚವನ್ನು ಕಣ್ತುಂಬ ನೋಡಿ, ಕೃತಾರ್ಥಳಾಗಬೇಕೆಂದು ಬಯಸಿದ ಭಾನುಮತಿಯು, ಮಗನ ಈ ಕರ್ಣಕಠೋರ ವಚನಗಳಿಂದ ಹತಾಶಳಾದದ್ದರಲ್ಲಿ ಏನಾಶ್ಚರ್ಯವು?

ಕಾಶೀನಾಥನ ಸ್ವಭಾವದಲ್ಲಿ ಇಷ್ಟು ವಿರಕ್ತಿಯುಂಟಾಗಲಿಕ್ಕೆ ಅನೇಕ ಕಾರಣಗಳಿದ್ದವು. ಸೀತಾಪುರಕ್ಕೆ ಬಂದಂದಿನಿಂದ ಭಾನುಮತಿಯು ಮೇಲಿಂದ ಮೇಲೆ ತನ್ನ ವಂದನೀಯ ಮಾವನ ಗುಣಾನುವಾದವನ್ನು ಮಾಡುತ್ತಾ, ಶೋಕಾಕ್ರಾಂತಳಾಗುತ್ತಿದ್ದಳು. ಆ ಮಹಾಮಹಿಮನ ಸದಾಚರಣೆಯನ್ನೂ, ಶಾಂತ ಸ್ವಭಾವವನ್ನೂ ಮತ್ತು ಧರ್ಮದ ಮೇಲಿನ ಅಚಲ ಶ್ರದ್ಧೆಯನ್ನೂ ಮಗನ ಮುಂದೆ ಹೇಳುತ್ತಿದ್ದಳು. ಮಾವನವರ ಶೋಧ ಮಾಡುವದಕ್ಕೋಸ್ಕರ ಸುತ್ತಲೂ ಜನರನ್ನು ಕಳಿಸಬೇಕೆಂದು ಆಕೆಯು ಗಂಡನಿಗೆ ಮೇ-

ಲಿಂದಮೇಲೆ ವಿನಂತಿ ಮಾಡಿಕೊಳ್ಳುತ್ತಿದ್ದಳು. ಬರಹೋಗುವವರ ಮುಂದೆ ಯಾವಾಗಲೂ ಆ ಮಹಾತ್ಮನ ಅತ್ಯಂತ ಪವಿತ್ರ ವರ್ತನವನ್ನು, ದಯಾಪೂರಿತ ಅಂತಃಕರಣವನ್ನೂ, ಧರ್ಮದ ಮೇಲಿನ ಅತ್ಯಂತ ಶ್ರದ್ಧೆಯನ್ನೂ, ಶಾಂತಸುಸ್ವಭಾವವನ್ನೂ ಆಕೆ ವರ್ಣಿಸುವದನ್ನು ಕಾಶೀನಾಥನು ಮೇಲಿಂದ ಮೇಲೆ ಕೇಳುತ್ತಿದ್ದನು. ಅದರಂತೆ ಅಜ್ಜನು ಚಿಕ್ಕಂದಿನಲ್ಲಿರುವಾಗ ತನ್ನನ್ನು ಯಾವಾಗಲೂ ಎದೆಗೆ ಅವಚಿಕೊಂಡು ಮುದ್ದು ಕೊಡುತ್ತಿದ್ದನೆಂಬದನ್ನು, ತನ್ನ ಮೇಲೆ ಅತ್ಯಂತ ಮಮತೆಯನ್ನು ಮಾಡುತ್ತಿದ್ದನೆಂಬದನ್ನೂ ಆತನು ಕೇಳಿದ್ದನು ಇವೆಲ್ಲ ಕಾರಣಗಳಿಂದ ಕಾಶೀನಾಥನ ಮನದಲ್ಲಿ ಪರಮಪೂಜ್ಯ ಪಿತಾಮಹನ ವಿಷಯಕ್ಕೆ ವಿಲಕ್ಷಣವಾದ ಆದರವೂ, ಅಚಲವಾದ ಶ್ರದ್ಧೆಯೂ, ಅಲೌಕಿಕ ಪ್ರೀತಿಯೂ, ಅಗಾಧಭಕ್ತಿಯೂ ಉತ್ಪನ್ನವಾಗಿದ್ದವು. ಪತಿವ್ರತೆಯಾದ ಭಾನುಮತಿಯು ಪತಿನಿಂದೆಯನ್ನು ಮಾಡುತ್ತಿದ್ದಿಲ್ಲ; ಆದರೆ ಮೇಲಿಂದ ಮೇಲೆ ಪೂಜ್ಯಮಾವನ ಗುಣಾನುವಾದವನ್ನು ಮಾತ್ರ ಮಾಡುತ್ತಿದ್ದಳು. ತಂದೆಯ ನಡತೆಯು ಅಜ್ಜನ ವರ್ತನವನ್ನು ಸರಿಗಟ್ಟದಿರುವದನ್ನು ನೋಡಿ, ಕಾಶೀನಾಥನ ಮನದಲ್ಲಿ ಅಜ್ಜನ ಭಕ್ತಿ-ಶ್ರದ್ಧೆಗಳು ಬೆಳೆಯುತ್ತ ಹೋದ ಹೋದಂತೆ, ಸಂಸಾರದಲ್ಲಿಯ ಪ್ರೇಮವು ಕಡಿಮೆಯಾಗಹತ್ತಿತು

ಅಜ್ಜನ ಮೇಲೆ ಅತ್ಯಂತ ಭಕ್ತಿ-ವಿಶ್ವಾಸವುಳ್ಳ ಕಾಶೀನಾಥನು ಅಜ್ಜನು ಜೀವಂತನಿದ್ದು, ಒಮ್ಮೆಲ್ಲೊಮ್ಮೆ ನಿಶ್ಚಯವಾಗಿ ಸ್ವದೇಶಕ್ಕೆ ಬರುವನೆಂದು ಯಾವಾಗಲೂ ಅನ್ನುತ್ತಿದ್ದನು ಆತನು ಹದಿನೈದು ಹದಿನಾರು ವರುಷದವನಾದ ಕೂಡಲೆ ಊರೊಳಗಿನ ಜ್ಯೋತಿಷಿಗಳ-ಭೂತ-ಭವಿಷ್ಯ ಜ್ಞಾನವುಳ್ಳವರ ಹತ್ತರ-ಹೋಗಿ: "ಅಜ್ಜಂದಿರು ಜೀವಂತ ಇರುವರೋ ಇಲ್ಲವೋ? ಇದ್ದರೆ ಎಲ್ಲಿ ಇರಬಹುದು? ನನಗೆ ಅವರು ಭೆಟ್ಟಿಯಾಗುವರೋ ಇಲ್ಲವೋ? ಅವರು ಸ್ವದೇಶಕ್ಕೆ ಎಂದು ತಿರುಗಿ ಬರಬಹುದು?" ಇತ್ಯಾದಿ ಪ್ರಶ್ನೆಗಳನ್ನು ಕೇಳುತ್ತಿದ್ದನು ಹೀಗಿರುತ್ತಿರಲು, ಮಗನಿಗೆ ಲಗ್ನ ಮಾಡಿಕೊಳ್ಳೆಂದು ಭಾನುಮತಿಯು ಬಹು ಪರಿಯಾಗಿ ಹೇಳಿ ನೋಡಿದಳು. ಆತನು ತನ್ನ ಹಟವನ್ನೇನೂ ಬಿಡಲಿಲ್ಲ. ಮುಂದೆ ಕೆಲದಿನಗಳಲ್ಲಿ ಈ ಭಾನುಮತಿಯು ದೈವಗತಿಯಿಂದ ಪರಲೋಕವಾಸಿಯಾದಳು!! ಭಾನು

ಮಂತ್ರಿಯು ತೀರಿದ ಬಳಿಕಂತೂ ಗಂಗಾಪ್ರಸಾದನು ಕಾಶೀನಾಥನಿಗೆ ಲಗ್ನ ಮಾಡಿಕೊಳ್ಳುವದರ ಸಲುವಾಗಿ ಬಹಳ ಆಗ್ರಹ ಮಾಡಹತ್ತಿದ ಗಿದನು; ಆದರೆ ಕಾಶೀನಾಥನು ಏನು ಮಾಡಿದರೂ ತಂದೆಯು ಮಾತಿಗೆ ಒಪ್ಪಲಿಲ್ಲ. ಒಂದು ದಿವಸವಂತೂ ಆತನು ತಂದೆಗೆ “ನಾನು ಲಗ್ನಮಾಡಿಕೊಳ್ಳುವದಕ್ಕೆ ಎಂದೂ ಸಮ್ಮತಿಸುವದಿಲ್ಲ. ನಾನು ಲಗ್ನವಿಲ್ಲದೆ ಮನೆಯಲ್ಲಿದ್ದರೆ ನಿಮಗೆ ಹ್ಯಾಗೆ ಹ್ಯಾಗೋ ಆಗುತ್ತಿರಬಹುದು. ಹಾಗಿದ್ದರೆ ನಾನು ಎಲ್ಲಿಗಾದರೂ ಹೊರಟು ಹೋಗುತ್ತೇನೆ!” ಎಂದು ಸ್ಪಷ್ಟವಾಗಿ ಹೇಳಿಬಿಟ್ಟನು!

ಕಾಶೀನಾಥನ ಈ ಸ್ಪಷ್ಟೋಕ್ತಿಯನ್ನು ಕೇಳಿ, ಪತ್ನಿಯು ವಿಯೋಗದಿಂದ ಮೊದಲೇ ಖಿನ್ನಮನಸ್ಕನಾದ ಗಂಗಾಪ್ರಸಾದನು ಮತ್ತಷ್ಟು ಗ್ಲಾನವದನನು. ಆತನಿಗೆ ಏನು ಮಾಡಬೇಕೆಂಬದು ತಿಳಿಯದಾಯಿತು. ಆತನು ಲಗ್ನಮಾಡಿಕೊಳ್ಳೆಂದು ಮಗನಿಗೆ ಆಗ್ರಹ ಮಾಡುವದನ್ನೇ ಬಿಟ್ಟುಬಿಟ್ಟನು. ಆತನು ಯಾವಾಗಲೂ ಏಕಾಂತಸ್ಥಳದಲ್ಲಿ ಕುಳಿತು ಹಣೆ-ಹಣೆ ಗಟ್ಟಿಸಿಕೊಳ್ಳುತ್ತ, ತನ್ನ ಅದೃಷ್ಟವನ್ನು ತಾನೇ ಹಳಿದುಕೊಳ್ಳುತ್ತಿದ್ದನು. ಹುಚ್ಚೆತ್ತು ವ್ಯಗ್ರವಾದ ಮನಸ್ಸನ್ನು ಸಮಾಧಾನಗೊಳಿಸುವದಕ್ಕಾಗಿ “ನಾನು ನನ್ನ ದೈವವನ್ನು ಹಳಿಯುವದಾದರೂ ಏಕೆ? ‘ಬಿತ್ತಿದ್ದನ್ನು ಬೆಳೆಗೋ’ ಎಂಬಂತೆ, ಮಾಡಿದ ಕರ್ಮದ ಫಲವನ್ನು ಈಗ ಉಣ್ಣುವ ಹೊತ್ತು ಬಂದಿದೆ. ನಾನು ನನ್ನ ಪರಮಪೂಜ್ಯತಾತಂದಿರಿಗೆ ಅಂಕಿತನಾಗಿರಲಿಲ್ಲ. ಅವರ ಆಜ್ಞೆಯನ್ನು ಧಿಕ್ಕರಿಸಿದೆನು. ನಿಷ್ಠುರ ನಡೆ ನುಡಿಗಳಿಂದ ಆ ಮಹಾತ್ಮನನ್ನು ಬಹಳ ಪರಿಯಾಗಿ ನೋಯಿಸಿದೆನು. ಇಂಥ ಚಾಂಡಾಲನಾದ ನಾನು, ಇದೇ ಜನ್ಮದಲ್ಲಿಯೇ ಕೃತಕರ್ಮದ ಫಲವನ್ನು ಅನುಭವಿಸಹತ್ತಿರುವೆನು! ಅಂತೆಯೇ ನನ್ನ ಮಗನು ನನ್ನ ಅವಜ್ಞೆಯನ್ನು ಮಾಡುತ್ತಿರುವನು!” ಎಂದು ನುಡಿಯುತ್ತಿದ್ದನು.

ಗಂಗಾಪ್ರಸಾದನು ಸ್ವಾರ್ಥಮೂಲಕವಾಗಿ ತಂದೆಯ ಮಾತನ್ನು ಮೀರಿ ನಡೆದಿದ್ದರೆ, ಕಾಶೀನಾಥನು ನಿಸ್ವಾರ್ಥಿಯಾಗಿ ತಂದೆಯನ್ನು ಮೀರಿ ನಿಂತಿದ್ದನು. ಅಂತೂ ಇಬ್ಬರೂ ಒಂದೇ!



## ಚಿಂತೆಯೇ ಮುಪ್ಪು!

ಬೆಳಗಾಯಿತು; ಚುಮು ಚುಮು ನಸುಕು. ತಾರೆಗಳ ಅಧಿರಾಜನಾದ ಶೀತಕರನು ಪಶ್ಚಿಮಾದ್ರಿಯ ಕಡೆಗೆ ಲಗುಬಗೆಯಿಂದ ಸಾಗಿದ್ದು, ಸಪರಿವಾರ ನಿಸ್ತೇಜವಾಗತೊಡಗಿದ್ದಾನೆ. ಪಕ್ಷಿಗಳ ಕಿಲಕಿಲಾಟವು ಹಿಂದೇಸವನೆ ನಡೆದಿದೆ. ಪ್ರಾಚ್ಯದಿಗ್ವಧುವು ಪತ್ಯಾಗಮನದ ಸಂಭ್ರಮದಿಂದ ನಗುವಂತೆ ಅರುಣವರ್ಣವನ್ನು ಧರಿಸತೊಡಗಿರುವಳು. ಕೃಷ್ಣವರ್ಣದ ನಿರ್ಮಲ ಜಲವುಳ್ಳ ಯಮುನೆಯು ಶಾಂತವಾಗಿ ಹರಿಯುತ್ತಿದ್ದಾಳೆ. ಮಂದಮಾರುತನು ಸುಳ್ಳನೆ ಸುಳಿಯತೊಡಗಿದ್ದರಿಂದ, ಪ್ರವಾಹದ ವಿರುದ್ಧ ದಿಕ್ಕಿಗೆ ಸೂಕ್ಷ್ಮ ತೆರೆಗಳು ಹುಟ್ಟತೊಡಗಿವೆ. ನದಿಯ ಎರಡೂ ದಡಗಳಲ್ಲಿಯ ಹುಲ್ಲು, ಮಂಜಾವಿನ ತಂಪಿನಿಂದ ಅತ್ಯಂತ ಶೀತಲವಾಗಿದೆ. ಜಲಚರಗಳು ಮನಸೋಕ್ತ ವಿಹರಿಸತೊಡಗಿವೆ. ಅಂಥ ಸಮಯದಲ್ಲಿ ಯಮುನೆಯ ತೀರದಲ್ಲಿ ಎರಡು ಶವಗಳು ಉಸುಕಿನ ಮೇಲೆ ಅಸ್ತವ್ಯಸ್ತವಾಗಿ ಬಿದ್ದಿದ್ದು, ಬೇರೊಂದು ಕಡೆಗೆ ಮೂರ್ಛಾಗತವಾಗಿದ್ದ ಒಂದು ವ್ಯಕ್ತಿಯು ಶವಸದೃಶವಾಗಿ ಬಿದ್ದುಕೊಂಡಿತ್ತು!

ಪ್ರಿಯವಾಚಕರೇ, ಕಾಲಮಾಹಾತ್ಮ್ಯವು ಆಶ್ಚರ್ಯಕರವಾದುದು. ಯಾವ ದಿಲ್ಲಿಯಲ್ಲಿ ಇಡೀ ಭರತಭೂಮಿಯನ್ನು ಗದಗದನೆ ನಡುಗಿಸಿದ ಔರಂಗಜೇಬನಂಥ ಸಾಮ್ರಾಟನು ಸ್ವಲ್ಪ ದಿವಸಗಳ ಪೂರ್ವದಲ್ಲಿ ಆಳುತ್ತಿದ್ದನೋ, ಅದೇ ದಿಲ್ಲಿಯ ಹತ್ತರದಲ್ಲಿ ಠಕ್ಕ ಜನರ ಭಯಂಕರ ಪುಂಡಾಟಿಕೆಯು ಈಗ ನಡೆದಿರುವದು. ಈ ಠಕ್ಕಜನರು ಮಾಡಿದ ಭಯಂಕರ ಕ್ರೂರಕೃತ್ಯಗಳನ್ನು ಪ್ರತ್ಯಕ್ಷ ನೋಡುವದೊತ್ತಟ್ಟಿಗಿರಲಿ, ಕಿವಿಯಿಂದ ಕೇಳುವದು ಕೂಡಾ ಅಸಹ್ಯವಾಗಿರುವದು. ಈ ಜನರು ಟೋಳಿಗಟ್ಟಿಕೊಂಡು ತಿರುಗುತ್ತ, ಸಭ್ಯಗೃಹಸ್ಥರಂತೆ ಉಡಿಗೆ-ತೊಡಿಗೆಗಳನ್ನು ಧರಿಸಿ, ಪಾಂಥಸ್ಥರನ್ನು ಅತಿ ಸಖ್ಯದಿಂದಲೇ, ಕೊರಳಿಗೆ ವಸ್ತ್ರವನ್ನು ಬಿಗಿದು ಕೊಲ್ಲುತ್ತಿದ್ದರು. ಇಂಥ ಅತ್ಯಂತ ಸಭ್ಯ(?) ಕೊಲೆಗಡಕರಿಗೆ ಮೇಲೆ ಹೇಳಿದ ಮೂವರು ಆಹುತಿಯಾಗಿದ್ದರು. ಅಕೋ, ಅತ್ತ ನೋಡಿರಿ; ನೀರೊಳಗೆ ಬಿದ್ದ ವ್ಯಕ್ತಿಯು ತನ್ನ ಕೈಕಾಲುಗಳನ್ನು ಮೆಲ್ಲನೆ ಎಳೆದುಕೊಳ್ಳುವದನ್ನು!

ಸ್ವಲ್ಪಹೊತ್ತಿನಲ್ಲಿ ಮುಂಜಾವಿನ ತಂಗಾಳಿಯಿಂದ ಇಷ್ಟೊತ್ತಿನ ವರೆಗೆ ಶವಾವಸ್ಥೆಯಲ್ಲಿದ್ದ ಆ ಮನುಷ್ಯನು ಪೂರ್ಣ ಎಚ್ಚತ್ತನು. ಆತನ ಮೈಯೆಲ್ಲ ಹುಣ್ಣು ಹುಣ್ಣು ಆಗಿತ್ತು. ಆತನು ತರುಣನಾಗಿದ್ದನು ಕಿಂಚಿತ್ಕಾಲದಲ್ಲಿ ಆ ತರುಣನು ಸಾವರಿಸಿಕೊಂಡು ಎದ್ದು ಕುಳಿತು, ಕ್ಷೀಣದೃಷ್ಟಿಯಿಂದ ಸುತ್ತೆಲ್ಲ ನಿರೀಕ್ಷಿಸಿದನು. ಆಗ ಅವನ ದೃಷ್ಟಿಗೆ ಉಳಿದ ಎರಡು ಹೆಣಗಳ ದುರವಸ್ಥೆಯು ಬಿದ್ದಿತು. ಕೂಡಲೆ, 'ಅಯ್ಯೋ!' ಎಂದು ಪುನಃ ದೊಪ್ಪನೆ ನೆಲಕ್ಕೆ ಬಿದ್ದು ಮೂ-ರ್ಛಿತನಾದನು. ಮತ್ತೆ ಒಂದೆರಡು ಗಳಿಗೆಗಳು ಕಳೆದ ಬಳಿಕ ಎಚ್ಚತ್ತು ಒಂದೇಸವನೆ ಶೋಕಮಾಡಲಾರಂಭಿಸಿದನು. ಪ್ರಿಯವಾಚಕರೇ, ಆ ಶವಗಳು ಬೇರೆ ಯಾರವೂ ಆಗಿರದೆ, ಆ ತರುಣನ ತಂದೆಯು ಹಾಗು ಬಹು ದಿವಸದಿಂದ ಮನೆಯಲ್ಲಿದ್ದ ಪರಿಚಾರಿಕೆಯು ಶವಗಳಾಗಿದ್ದವು!

ಲಾಹೋರದಲ್ಲಿ ಜ್ಯೋತಿಷಶಾಸ್ತ್ರ ನಿಪುಣನಾದ ಪಂಡಿತ ಶಾಂತಾಪ್ರಸಾದನೆಂಬ ಬ್ರಾಹ್ಮಣನು ಇರುತ್ತಿದ್ದನು. ಆತನಿಗೆ ಸೀತಾಪುರದಲ್ಲಿಯ ಜ್ಯೋತಿಷ ಪಂಡಿತ ಶಂಭುಪ್ರಸಾದನ ತಂಗಿಯನ್ನು ಕೊಟ್ಟಿತ್ತು. ಮುಂದೆ ಆ ದಂಪತಿಗಳ ಹೊಟ್ಟೆಯಲ್ಲಿ ಅಯೋಧ್ಯಾನಾಥನೆಂಬ ಮಗನೂ, ಕೈಲಾಸೇಶ್ವರೀ ಎಂಬ ಮಗಳೂ ಹುಟ್ಟಿದರು. ಸೀತಾಪುರದಲ್ಲಿಯ ಶಂಭುಪ್ರಸಾದನು ಜ್ಯೋತಿಃಶಾಸ್ತ್ರದಲ್ಲಿ ಅತ್ಯಂತ ಪಾರಂಗತನಿದ್ದ ಮೂಲಕ, ಶಾಂತಾಪ್ರಸಾದನು ಅಲ್ಲಿಯೇ ಜ್ಯೋತಿಃಶಾಸ್ತ್ರವನ್ನು ಅಭ್ಯಾಸಿಸಿದ್ದನು, ಪಂಡಿತ ಶಂಭುಪ್ರಸಾದನ ಮಕ್ಕಳಾದ ದೇವೀಪ್ರಸಾದ ಮತ್ತು ಬಲದೇವಪ್ರಸಾದರೂ ಜ್ಯೋತಿಷ್ಯದಲ್ಲಿ ನಿಷ್ಣಾತರಿದ್ದರು. ಪಂಡಿತ ಶಾಂತಾಪ್ರಸಾದನು ಮನೆಯಲ್ಲಿಯೇ ಅಯೋಧ್ಯಾನಾಥನಿಗೆ ಸರಾಸರಿ ಅಭ್ಯಾಸ ಮಾಡಿಸಿದ ತರುವಾಯ, ಹೆಚ್ಚಿನ ಅಭ್ಯಾಸಕ್ಕೆಂದು ಸೀತಾಪುರಕ್ಕೆ ಕರಕೊಂಡು ಹೊರಟಿದ್ದನು. ಸಂಗಡ ಮನೆಯಲ್ಲಿಯ ದಾಸಿಯನ್ನೂ, ಜನ್ಮಕ್ಕೆ ಬಂದ ಸ್ವಲ್ಪಾವಧಿಯಲ್ಲಿಯೇ ಜನನಿಯನ್ನು ಕಳಕೊಂಡಿದ್ದ ಕೈಲಾಸೇಶ್ವರಿಯೆಂಬ ೪-೫ ವರುಷದ ಮಗಳನ್ನೂ ಕರಕೊಂಡಿದ್ದನು. ಇಂತು ಆ ಕುಟುಂಬವು ಸೀತಾಪುರಕ್ಕೆ ಹೋಗುವದರ ಸಲುವಾಗಿ ದಿಲ್ಲಿಯ ಮೇಲಿಂದ ಸಾಗಿರಲು, ಒಂದು ದಿವಸ ಸಾಯಂಕಾಲದ ಸಮಯದಲ್ಲಿ ಅಕಸ್ಮಾತ್ ದಿಲ್ಲಿಯ ಹತ್ತರ ಒಂದು ಠಕ್ಕರ ಟೋಳಿಯು ಅವರಿಗೆ ಗಂಟುಬಿತ್ತು.

ಆಗ ಪಾಪ! ಆ ಅನಾಥ ತಂದೆ-ಮಕ್ಕಳನ್ನೂ ಮತ್ತು ದಾಸಿಯನ್ನೂ ತಮ್ಮ ಶಿಷ್ಟಾಚಾರದಂತೆ ಆ ಮೋಸಗಾರರು ವ್ಯವಸ್ಥೆಗೊಳಿಸಿ, ಚಿಕ್ಕ ಮಗುವಾದ ಕೈಲಾಸೇಶ್ವರಿಯನ್ನು ತೆಗೆದುಕೊಂಡು ಓಡಿ ಹೋಗಿ ಬಿಟ್ಟರು! ಸುದೈವದಿಂದ ೧೮-೧೯ ವರುಷದ ತರುಣನಾದ ಅಯೋಧ್ಯಾನಾಥನ ಹರಣವು ಸಂಪೂರ್ಣವಾಗಿ ಹಾರಿದ್ದಿಲ್ಲ; ಆದರೆ ಠಕ್ಕರು ಮೂವರೂ ಸತ್ತರೆಂದು ತಿಳಿದು, ಆ ಮೂರೂ ಶವಗಳನ್ನು ನದೀತೀರದಲ್ಲಿ ಬಿಸುಟಿದ್ದರು

ಮಾರನೇದಿವಸ ಮುಂಜಾವಿನ ತೆಂಕಣ ತಂಗಾಳಿಯಿಂದ ಎಚ್ಚತ್ತ ಅಯೋಧ್ಯಾನಾಥನು, ತಂದೆಯ ದುರ್ಮರಣವನ್ನು ನೋಡಿ, ಬಲು ದುಃಖಪಟ್ಟನು ದೊಡ್ಡ ಧ್ವನಿತೆಗೆದು ಅಳಹತ್ತಿದನು. ಆತನ ಈ ದುಃಖವನ್ನು ಶಮನ ಮಾಡಲಿಕ್ಕೆ ಅಲ್ಲಿ ಯಮುನೆಯ ಹೊರತಾಗಿ ಮತ್ತೆ ಯಾರೂ ಇದ್ದಿದ್ದಿಲ್ಲ ಮೊದಲಿನ ದುಃಖದ ಆವೇಶವು ತುಸ ಕಡಿಮೆಯಾದನಂತರ ತಾನು ಕುಳಿತಲ್ಲಿಂದ ಎದ್ದು ಆತನು ತಂದೆಯ ಶವದ ಬಳಿಯಲ್ಲಿ ಬಂದನು; ಆದರೆ ತಂಗಿಯ ಶವವು ಮಾತ್ರ ಎಲ್ಲಿಯೂ ಕಾಣಲೊಲ್ಲದು. ಆತನು ಸುತ್ತು ಶೋಧಿಸಿದನು ಎಲ್ಲವೂ ವ್ಯರ್ಥ! ಆಗ ಆತನು ತಂಗಿಯನ್ನು ನೀಚರಾದ ಆ ಠಕ್ಕರು ಬಹುಶಃ ಎತ್ತಿಕೊಂಡು ಹೋಗಿರಬಹುದೆಂದು ತರ್ಕಿಸಿ, ಮತ್ತಷ್ಟು ದುಃಖಿಸಹತ್ತಿದನು; ಆದರೆ ಮನುಷ್ಯನು ದುಃಖವನ್ನು ಎಷ್ಟೆಂತ ಮಾಡುವನು? ತಾಸೆರಡು ತಾಸುಗಳಾದ ಬಳಿಕ. ಏನಾದರೊಂದು ಕಲ್ಪನೆಯನ್ನು ಮಾಡಿ ದುಃಖವನ್ನು ನುಂಗಿಕೊಳ್ಳುವನು ಅದರಂತೆ ಅಯೋಧ್ಯಾನಾಥನೂ ತುಸ ಸ್ಥೈರ್ಯವನ್ನು ತಂದುಕೊಂಡು: "ನಾನು ಇನ್ನು ಬದುಕಿದ್ದು ಮಾಡುವುದಾದರೂ ಏನು? ಪ್ರೀತಿಯ ತಂದೆಯೋ ನನ್ನನ್ನು ಬಿಟ್ಟು ಹೋದನು ನಾನಾದರೂ ತಂದೆಯ ಮಾರ್ಗವನ್ನನುಸರಿಸುವದೇ ಯೋಗ್ಯವು. ದೇವಾ! ನಿನ್ನಿನ ದಿವಸವೇ ನಾನು ಪರಲೋಕಕ್ಕೆ ಹೋಗಿದ್ದರೆ, ತಂದೆಯ ಈ ದುರ್ಮರಣವನ್ನೂ, ತಂಗಿಯು ಠಕ್ಕರ ಪಾಲಾದುದನ್ನೂ ನೋಡುವ ಪ್ರಸಂಗವು ನನ್ನ ಮೇಲೆ ಬರುತ್ತಿದ್ದಿಲ್ಲ''ಎಂದು ಹಳಹಳಿಸುತ್ತ, ಆ ಎರಡೂ ಶವಗಳನ್ನು ಯಮುನೆಯ ಮಧ್ಯಪ್ರವಾಹಕ್ಕೆ ದೂಡಿ ಜಲಚರಗಳಿಗೆ ಆಹುತಿಯಾಗಿ ಕೊಟ್ಟು, ಇನ್ನು ತಾನೂ ಯಮುನೆಯನ್ನೇ ಆಶ್ರಯಿಸ

ಸ್ವರ ಗೊತ್ತಾಗಿರುತ್ತದೆ. ನನಗೆ ಅದು ಹೇಗೆ ಗೊತ್ತಾಯಿತೆಂಬದನ್ನು ತಿಳಿದುಕೊಳ್ಳುವ ಗೊಡವೆಗೆ ನೀನು ಹೋಗಬೇಡ! ನಿನ್ನ ತಂಗಿಯನ್ನು ದುಷ್ಟರು ತೆಗೆದುಕೊಂಡು ಹೋಗಿರುವರು. ಆ ಅನಾಥ ಕೂಸನ್ನು ರಕ್ಷಿಸುವದು ನಿನ್ನ ಕರ್ತವ್ಯವಲ್ಲವೇ? ಅದನ್ನು ಬಿಟ್ಟು, ಹೀಗೆ ಅಧಃಪತನದ ಮಾರ್ಗವನ್ನನುಸರಿಸುವದು ತರವೇ?''

''ಶ್ರೀಪ್ರ್ಯರೇ, ನನ್ನ ತಂಗಿಯು ಎಂದಾದರೂ ಲಭಿಸಬಹುದೇ? ಆ ದುಷ್ಟ ವೇಷಗಾರರು ಆ ಅನಾಥ ಬಾಲಿಕೆಯ ಅವಸ್ಥೆಯನ್ನು ಏನು ಮಾಡುವರೋ ದೇವರೇ ಬಲ್ಲ! ನಾನು ತಂಗಿಯ ಆಶೆಯನ್ನು ಮಾಡುವದೆಂದರೆ, ಸಿಂಹನ ದವಡೆಯಲ್ಲಿ ಸಿಕ್ಕ ಆಹಾರವನ್ನು ಕಸಿದುಕೊಳ್ಳುವಂತೆಯೇ ಸರಿ!''

''ನಿನ್ನ ತಂಗಿಯು ರಾಕ್ಷಸರ ದವಡೆಯೊಳಗಿಂದಲೂ, ಸಿಂಹನ ಗುಹೆಯೊಳಗಿಂದಲೂ ಸುರಕ್ಷಿತವಾಗಿ ಪಾರಾಗಿ, ನಿನಗೆ ದರ್ಶನಕೊಡಬಹುದು. ನೀನು ಈಗ ಮನೆ ಬಿಟ್ಟು ಹೊರಡುವಾಗ ನಿಶ್ಚಯಿಸಿದಂತೆ ನಿನ್ನ ಕಾರ್ಯಕ್ಕೆ ಹೋಗು. ವಿಲಂಬ ಮಾಡಬೇಡ.''

''ನಾನು ಠಕ್ಕರ ಹಾವಳಿಯೊಳಗಿಂದ ಪಾರಾಗಿ ಸೀತಾಪುರಕ್ಕೆ ಸುರಕ್ಷಿತವಾಗಿ ಮುಟ್ಟುವ ಬಗೆ ಹೇಗೆ?''

''ಅದೆಲ್ಲವನ್ನು ಹಿಂದಿನಿಂದ ಹೇಳುವೆನು. ನನ್ನ ಸಂಗಡ ಬಾ'' ಎಂದು ಆ ಗೃಹಸ್ಥನು ತರುಣನನ್ನು ಸಂತೈಸಿ, ದಿಲ್ಲಿಯ ಊರೊಳಗೆ ಕರಕೊಂಡು ಹೋದನು; ಹಾಗು ಒಂದೆರಡು ದಿವಸಗಳ ತರುವಾಯ ಸಭ್ಯದಾರಿಕಾರರ ಸಂಗಡ ಆತನನ್ನು ಸೀತಾಪುರಕ್ಕೆ ಕಳಿಸಿಕೊಟ್ಟನು

ಅಯೋಧ್ಯಾನಾಥನು ಸೀತಾಪುರಕ್ಕೆ ಮುಟ್ಟಿದನು; ಆದರೆ ಅಲ್ಲೇನಿದೆ? ಮಾವನ ಮನೆಯಲ್ಲಿ ಯಾರೂ ಇಲ್ಲ. ತಾಲೂಕದಾರರ ಭಯಂಕರ ಹಾವಳಿಯಿಂದ ಮಾನಭ್ರಷ್ಟರಾದ ಶಂಭುಪ್ರಸಾದನ ಮನೆಯಲ್ಲಿಯ ಎಲ್ಲ ಸ್ತ್ರೀಯರು ಶರಯೂನದಿಯ ಮಡುವನ್ನು ಆಶ್ರಯಿಸಿದರೆಂದೂ, ದೇವೀಪ್ರಸಾದ-ಬಲದೇವಪ್ರಸಾದರು ಆಗ್ಗೇ ಮನೆ ಮಾರುಗಳನ್ನು ಬಿಟ್ಟುಕೊಟ್ಟು ಎತ್ತೋ ಹೋಗಿಬಿಟ್ಟರೆಂದೂ ತಿಳಿಯಿತು. ಆಗ ಆತನ ಮೈಮೇಲೆ ಆಕಾಶವೇ ಕಡಕೊಂಡು ಬಿದ್ದಂತಾಯಿತು! ಮನೆಯ ಮುಂದೆ ಕುಳಿತು ದೊಡ್ಡ ಧ್ವನಿತೆಗೆದು, ಭೋರೆಂದು ಅಳಹತ್ತಿದನು. ಪಾಪ! ನಡುದಾರಿಯಲ್ಲಿ ತಂದೆಯನ್ನೂ,

ಚಿಕ್ಕ ತಂಗಿಯನ್ನೂ ಕಳಕೊಂಡು ಅನಾಥನಾದ ಅಯೋಧ್ಯಾನಾಥ ನಿಗೆ ಮಾವನ ಮನೆಯ ದುಃಸ್ಥಿತಿಯನ್ನು ನೋಡಿ ಆದ ಆ ದುಃಖವ ನ್ನು ವರ್ಣಿಸಲಳವಲ್ಲ! ಅಷ್ಟರಲ್ಲಿ ಗಂಗಾಪ್ರಸಾದನ ಮಗನಾದ ಕಾಶೀ ನಾಥನು ಅದೇ ದಾರಿಯಿಂದ ಹಾಯ್ದು ಹೋಗುತ್ತಿದ್ದನು. ಕಾಶೀ ನಾಥನು ಅತ್ಯಂತ ಕರುಣಾಸ್ವಭಾವದವನೆಂಬದು ನಮ್ಮ ವಾಚಕರಿಗೆ ಗೊತ್ತಿದ್ದ ಸಂಗತಿಯೇ ಸರಿ. ಆತನು ಅಯೋಧ್ಯಾನಾಥನ ಹೀನ-ದೀನ ಮುಖಮುದ್ರೆಯನ್ನೂ, ಅವನು ಭಯಂಕರ ಶೋಕಸಾಗರ ದಲ್ಲಿ ಮುಳುಗಿರುವದನ್ನೂ ನೋಡಿ ಕನಿಕರಬಟ್ಟು, ನಾನಾಪರಿಯಿಂದ ಸಂತೈಸಿ, ತಮ್ಮ ಮನೆಗೆ ಕರಕೊಂಡು ಹೋದನು. ಅಂದಿನಿಂದ ಅಯೋಧ್ಯಾನಾಥನು ಗಂಗಾಪ್ರಸಾದನ ಮನೆಯಲ್ಲೇ ಇರಹತ್ತಿದನು

ಕಾಶೀನಾಥನು ತಂದೆಯನ್ನು ಲೆಕ್ಕಿಸದೆ, ದಿನೇ-ದಿನೇ ಅಧಿಕಾ ಧಿಕವಾಗಿ ವಿಲಕ್ಷಣನಾಗುತ್ತ ನಡೆದಿದ್ದನೆಂಬದು ಹಿಂದೆ ಹೇಳಿದೆಯಷ್ಟೇ? ಆತನು ಸದಾ ಸರ್ವದಾ ಬಹುಶಃ ಸಾಧು-ಸಂನ್ಯಾಸಿ-ಬೈರಾಗಿ-ಗೋಸಾವಿಗಳ ಸಂಗಡವೇ ಇರುತ್ತಿದ್ದನು. ಅವರ ಸೇವಾ-ಶುಶ್ರೂ ಷೆಯನ್ನು ಮಾಡುವ ಕಾಲಕ್ಕೆ ಆತನಿಗೆ ಹಸಿವೆ-ನೀರಡಿಕೆಗಳ, ತಂದೆ-ತಾಯಿಗಳ, ಮನೆ-ಮಾರುಗಳ ಸ್ಮರಣೆಯು ಕೂಡ ಆಗುತ್ತಿರಲಿಲ್ಲ! ಮಗನ ಈ ಸ್ಥಿತಿಯನ್ನು ನೋಡಿ, ಗಂಗಾಪ್ರಸಾದನು ಬಲು ಮರುಗಿ ದನು. ಒಂದಲ್ಲೊಂದು ದಿವಸ ಈತನು ಮನೆಮಾರುಗಳ ಮೇಲೆ ತುಲಸೀಪತ್ರವನ್ನಿಟ್ಟು, ಹೊರಟುಹೋಗಕ್ಕವನೆಂಬದು ಆತನಿಗೆ ಮನ ವಂಕೆಯಾಯಿತು. ತನ್ನ ತರುವಾಯ ಈ ಅಪಾರವಾದ ಸಂಪತ್ತಿ ಯೂ, ಈ ಜಹಾಗೀರಿಯೂ ನಷ್ಟವಾಗುವವೊ ಹೇಗೆ, ಎಂಬ ಚಿಂತೆ ಯಿಂದ ಆತನು ಬಹಳ ಅಸ್ವಸ್ಥನಾಗಿದ್ದನು. ಇಂತು ತರ್ಕ-ವಿತರ್ಕ ಗಳಲ್ಲಿ ಮಗ್ನನಾಗಿದ್ದ ಗಂಗಾಪ್ರಸಾದನು, ಚಿಕ್ಕಮಗಳಾದ ಮಾನ ಕುವರಿಯನ್ನು ಶ್ರೀಮಂತರ ಮನೆಗೆ ಕೊಡದೆ, ಓರ್ವ ಸಚ್ಚಾರಿತ್ರ ನಾದ ಬಡ ಹುಡುಗನಿಗೆ ಕೊಟ್ಟು, ಮನೆಮಾರುಗಳನ್ನೆಲ್ಲ ಆತನಿಗೇ ಅರ್ಪಿಸಬೇಕೆಂದು ನಿಶ್ಚಯಿಸಿದನು.

ಅಷ್ಟರಲ್ಲಿ ಮೇಲೆ ಹೇಳಿದಂತೆ ಕಾಶೀನಾಥನು ಅಯೋಧ್ಯಾ ನಾಥನನ್ನು ಕರಕೊಂಡು ಬಂದಿದ್ದನು. ಅಯೋಧ್ಯಾನಾಥನು ಸುಸ್ವಭಾವಿಯೂ, ಸಚ್ಚಾರಿತ್ರನೂ, ತರುಣನೂ ಮತ್ತು ಸುರೂಪಿಯೂ

ಆಗಿದ್ದನು. ಅಯೋಧ್ಯಾನಾಥನ ತಂದೆಯಾದ ಶಾಂತಪ್ರಸಾದನು ಗಂಗಾಪ್ರಸಾದನ ಮಿತ್ರನಿದ್ದನು. ಇಂಥ ಉಚ್ಚ ಕುಲೋತ್ಪನ್ನ ಸಚ್ಚರಿತ್ರ ತರುಣನನ್ನು ಕಂಡು, ತನ್ನ ಮಾನಕುಮಾರಿಗೆಂದು ವರ ಹುಡುಕುತ್ತಿದ್ದ ಗಂಗಾಪ್ರಸಾದನಿಗೆ, ಅಯೋಧ್ಯಾನಾಥನು ದರಿದ್ರನಿಗೆ ದ್ರವ್ಯದ ನಿಧಿಯು ದೊರೆತಂತಾದನು. ಆತನು ಅಯೋಧ್ಯಾನಾಥನ ಇತಿಹಾಸವನ್ನೆಲ್ಲ ಕೇಳಿದ ದಿವಸವೇ ಮಾನಕುಮಾರಿಯನ್ನು ಈತನಿಗೇ ಕೊಡಬೇಕೆಂದು ಮನದಲ್ಲಿ ನಿಶ್ಚಯಿಸಿದನು. ಸ್ವಲ್ಪ ದಿವಸಗಳಲ್ಲಿ ಅಯೋಧ್ಯಾನಾಥ-ಮಾನಕುಮಾರಿಯರು ಪರಸ್ಪರ ಪ್ರೇಮಭಾವವನ್ನು ತೋರ್ಪಡಿಸುವದೂ ಆತನಿಗೆ ಗೊತ್ತಾಯಿತು. ಕೂಡಲೆ ಗಂಗಾಪ್ರಸಾದನು ಆ ಪ್ರೇಮಿಯುಗ್ಮಗಳ ವಿವಾಹ ಮಾಡುವದನ್ನು ನಿಶ್ಚಯಿಸಿ, ಕಡುಸಂಭ್ರಮದಿಂದ ವಿವಾಹ ಮಹೋತ್ಸವವನ್ನು ಕೊನೆಗಾಣಿಸಿದನು. ಮುಂದೆ ತುಸ ದಿವಸಗಳಲ್ಲಿ ಮಾನಕುಮಾರಿಯು ಋತುಮತಿಯಾದಳು. ಷೋಡಶದಿವಸಗಳಲ್ಲಿಯೇ ಗರ್ಭಾಧಾನಕಾರ್ಯವೂ ಯಥಾಸಾಂಗವಾಗಿ ಜರುಗಿತು. ಆ ಪ್ರೇಮಿಯುಗ್ಮವು ಪರಸ್ಪರ ತೋರ್ಪಡಿಸುವ ಅಲೌಕಿಕ ಪ್ರೇಮವನ್ನು ನೋಡಿ, ಕಾಶೀನಾಥನ ಸ್ಥಿತಿಯಿಂದ ವ್ಯಥಿತಾಂತಃಕರಣಿಯಾದ ಗಂಗಾಪ್ರಸಾದನು ಸಂತಸಪಟ್ಟನು. ನಾರಾಯಣಕುಮಾರಿ-ಚಾಂದಕುಮಾರಿಯರಂತೂ ಮೊದಲೇ ತಮ್ಮ ತಮ್ಮ ಪ್ರಿಯಕರರ ಸಂಗಡ ಪ್ರೇಮದಿಂದಿರುವದರಿಂದ, ಗಂಗಾಪ್ರಸಾದನ ಆನಂದವು ಈಗ ಇಮ್ಮಡಿಸಿ ಹೋಯಿತು.

ಈ ಸಂಸಾರಸಾಗರದಲ್ಲಿ ಮನುಷ್ಯನಿಗೆ ಸ್ಥಿರವಾದ ಸುಖದ ಕಾಲವು ಲಭಿಸುವದು ಶಕ್ಯವಲ್ಲವಷ್ಟೇ? ಒಂದುವೇಳೆ ಸುಖದ ಕಾಲವು ಈ ಮರ್ತ್ಯಲೋಕದಲ್ಲಿ ಇದ್ದರೆ, ಮನುಷ್ಯನಿಗೆ ಪರಮಾರ್ಥದ ಸ್ಮರಣವು ಕೂಡ ಆಗುತ್ತಿತ್ತೊ-ಇಲ್ಲವೊ, ಎಂಬದು ಸಂದೇಹಾಸ್ಪದ ಪ್ರಶ್ನವೇ ಸರಿ. ಇರಲಿ. ಇಲ್ಲಿಯ ಆನಂದವು ಕ್ಷಣಿಕವು. ಹಗಲಿನ ಹಿಂದೆ ರಾತ್ರಿಯೂ, ರಾತ್ರಿಯ ಹಿಂದೆ ಹಗಲೂ ಬೆನ್ನು ಹತ್ತಿರುವಂತೆ, ಸುಖದ ಹಿಂದೆ ದುಃಖವೂ ದುಃಖದ ಹಿಂದೆ ಸುಖವೂ ಬೆನ್ನುಹತ್ತಿರುತ್ತವೆ. ಅಂದಮೇಲೆ ನಮ್ಮ ಗಂಗಾಪ್ರಸಾದನ ಆನಂದ ಕಾಲವು-ಸುಖದ ಕಲ್ಪನೆಯು-ಸ್ಥಿರವಾಗಿ ಉಳಿಯುವ ಬಗೆ ಹೇಗೆ?

ಮುಂದೆ ಹೊಸ ದಿವಸಗಳಲ್ಲಿಯೇ ಗಂಗಾಪ್ರಸಾದನ ಮೇಲೆ ಹಿಂದರ ಹಿಂದೊಂದು ದುಃಖಪ್ರಸಂಗಗಳು ಬರಹತ್ತಿ, ಆತನು ಅದರಿಂದ ಬಹು ಜರ್ಜರನಾದನು.

ಸಾದತಅಲ್ಲಿಯ ತರುವಾಯ ಗಾಝಿ'ಉದ್ದೀನ ಹೈದರನು ಅಯೋಧ್ಯಾಪತಿಯಾದನು. ಅಂಗ್ಲ ಕಂಪನಿಯ ಕೃಪಾಕಟಾಕ್ಷ ದಿಂದ ಆತನು ಸಾರ್ವಭೌಮನಾಗಬೇಕೆಂಬ ಹವ್ಯಾಸದಿಂದ ಬಡ ಪ್ರಜೆಗಳ ಮೇಲೆ ಭಯಂಕರ ಬಲುಮೆಯ ಕರಗಳನ್ನು ಕುಳ್ಳಿರಿಸಿದನು. ದೇಶದಲ್ಲಿ ಎತ್ತ ನೋಡಿದತ್ತಲ್ಲ ಬಂಡಾಯಗಳೇಳಲಾರಂಭಿಸಿದವು. ಕೈಯಲ್ಲಿ ನೂರಾರು ಸೇವಕರುಳ್ಳ ದೊಡ್ಡ ಜಮೀನದಾರರು ಅಸಹ್ಯ ಕರವನ್ನು ತೆತ್ತಲಾರದೆ, ತಾಲೂಕದಾರನ ಸಂಗಡ ಪ್ರಸಿದ್ಧರೀತಿ ಯಿಂದ ಯುದ್ಧವನ್ನು ಹೂಡಿದರು. ದುಷ್ಟ ತಾಲೂಕದಾರರು ಕರ ವಸೂಲ ಮಾಡುವ ಕಾಲಕ್ಕೆ ಅನಾಥ ಪ್ರಜೆಗಳ-ಸ್ತ್ರೀಯರ ಮಾನ ಭಂಗವನ್ನು ಮಾಡಲಿಕ್ಕೂ ಹಿಂಜರಿಯುತ್ತಿದ್ದಿಲ್ಲ. ಕೈಯಲ್ಲಿ ಹಣ ವಿಲ್ಲ, ತಾಲೂಕದಾರರ ವಿರುದ್ಧ ನಿಂತು ಮಾನರಕ್ಷಣೆ ಮಾಡಿಕೊಳ್ಳು ವಷ್ಟು ಸಾಮರ್ಥ್ಯವೂ ಇಲ್ಲ ಇಂಥ ಲಕ್ಷಾವಧಿ ಪ್ರಜೆಗಳ ಹೀನ-ದೀನ ಸ್ಥಿತಿಯನ್ನು ವಾಚಕರೇ ತರ್ಕಿಸಬೇಕಲ್ಲದೆ, ವಿವರಿಸುವದು ಅಸಂಭವವು ಕೆಲವರು ಗಂಗೆಯನ್ನು ಪ್ರವೇಶಿಸಿದರೆ, ಹಲವರು ಪ್ರಾಣಹತ್ಯ ಮಾಡಿಕೊಂಡರು. ಕೆಲವರು ತಮ್ಮ ಹೆಂಡಿರು-ಮಕ್ಕಳ ನ್ನು ಸ್ವತಃ ಕೊಂದು ಬಂಡುಗಾರರಲ್ಲಿ ಪ್ರವೇಶಿಸ-ತ್ತಿದ್ದರು ಹಲವರು ವಿರಕ್ತಭಾವದಿಂದ ಹಿಮಗಿರಿಯನ್ನಾಶ್ರಯಿಸುತ್ತಿದ್ದರು. ಇಂತು ಅಯೋಧ್ಯಾ ರಾಜ್ಯದಲ್ಲಿ ಅಸ್ವಸ್ಥತೆಯ ಸಾಮ್ರಾಜ್ಯವು ಪಸರಿಸಿದ ಸಮಯದಲ್ಲಿ ಸೀತಾಪುರವು ಬಂಡುಗಾರಿಕೆಯಲ್ಲಿ ಪ್ರಸಿದ್ಧಿಯನ್ನು ಪಡೆದಿತ್ತು. ಗಂಗಾಪ್ರಸಾದನ ಅಳಿಯಂದಿರಾದ ರಾಜಾದಿಗ್ವಿಜಯ ಸಿಂಹ-ಹರಪಾಲಸಿಂಹರು ಮುಖಂಡರಾಗಿ, ತಕ್ಕಷ್ಟು ಸೈನ್ಯವನ್ನು ಕೂಡಿಸಿ, ತಾಲೂಕದಾರರ ಸಂಗಡ ಮೇಲಿಂದ ಮೇಲೆ ಜಗಳಾಡುತ್ತಿ ದ್ದರು ಅವರು ವಸ್ತುತಃ ಸಂಗ್ರಾಮಪ್ರಿಯರಿದ್ದರು. ಅವರು ಎಷ್ಟೋ ಸಾರೆ ತಾಲೂಕದಾರರನ್ನು ಬೆನ್ನಟ್ಟಿ, ಸೀತಾಪುರವನ್ನು ದುಷ್ಟರ ಹಾವಳಿಯಿಂದ ತಡೆದು, ಸ್ವತಃ ಅರಸರಂತೆ ಆಳುತ್ತಿದ್ದರು. ಬರಬರುತ್ತ ಸೀತಾಪುರದ ಪ್ರಸ್ಥವು ಬೆಳೆಯಿತು ಪ್ರತ್ಯಕ್ಷ ಇಂಗ್ಲ

ಷರ ಸಹಾಯವನ್ನು ತೆಗೆದುಕೊಂಡು, ಸೀತಾಪುರದ ಬಂಡನ್ನು ಮುರಿಯುವದು ಅಗತ್ಯವಾಯಿತು. ಕಡೆಗೆ ನೇಪಾಳದ ಯುದ್ಧವು ಮುಗಿದ ಮೇಲೆ ಸೀತಾಪುರದ ಮೇಲೆ ಇಂಗ್ಲಿಷರ ದೊಡ್ಡ ಸೈನ್ಯವು ಕಳುಹಲ್ಪಟ್ಟಿತು. ಆ ಪ್ರಸಂಗದಲ್ಲಿ ಮಹಾರಾಜ ದಿಗ್ವಿಜಯಸಿಂಹ ಮತ್ತು, ರಾಜಾಹರಪಾಲಸಿಂಹರು ತಮ್ಮ ಅನುಯಾಯಿಗಳೊಡನೆ ಎದುರಾಗಿ, ಅತ್ಯಂತ ಪರಾಕ್ರಮದಿಂದ ಸಿಂಹಗಳಂತೆ ವೈರಿಗಳ ಸಂಗಡ ಹೋರಾಡಿ ಕಡೆಗೆ ವೀರಸ್ವರ್ಗವನ್ನೈದಿದರು! ಪ್ರತ್ಯಕ್ಷ ಸಿಂಹಗಳಂತಿರುವ ಈರ್ವ ಜಾಮಾತರೂ ಅಕಾಲದಲ್ಲಿಯೇ ಅಂತಕನ ವಶವಾದ್ದರಿಂದ, ಗಂಗಾಪ್ರಸಾದನು ಶೋಕಸಾಗರದಲ್ಲಿ ಮುಳುಗಿದನು. ಆಗಿನ ಕಾಲಕ್ಕೆ ಆತನ ಇಬ್ಬರೂ ವಿಧವೆಯರಾದ ಮಕ್ಕಳು ಮಾಡಿದ ಆಕ್ರೋಶವನ್ನು ವರ್ಣಿಸಲಳವಲ್ಲ!

ಮನುಷ್ಯನಿಗೆ ದುಃಖ ಪರಂಪರೆಗಳು ಬರಹತ್ತಿದವೆಂದರೆ, ಹಿಂದರಹಿಂದೊಂದು ಬಂದೇ ಬರುತ್ತವೆಂಬದು ಸುಳ್ಳಲ್ಲ. ಮೇಲಿನ ದುರ್ಧರ ಪ್ರಸಂಗವು ಸಂಭವಿಸಿದ ವರ್ಷಾರು ತಿಂಗಳಲ್ಲಿಯೇ ಗಂಗಾಪ್ರಸಾದನ ಮೇಲೆ ಮತ್ತೊಂದು ಭಯಂಕರ ಪ್ರಸಂಗವು ಒಂದೊದಗಿತು. ಹಿಂದು ದಿವಸ ಕಗ್ಗತ್ತಲೆಯಲ್ಲಿ ಯಾರೋ ದುಷ್ಟರು ಗಂಗಾಪ್ರಸಾದನ ಮನೆಗೆ ದರವಡೆಯನ್ನು ಹಾಕಿ, ಬೆಲೆಯುಳ್ಳ ವಸ್ತುಗಳನ್ನೆಲ್ಲ ಎಬ್ಬಿಸಿದ್ದಲ್ಲದೆ, ಸುಂದರಿಯಾದ ಮಾನಕುಮಾರಿಯನ್ನೂ ಅಪಹರಿಸಿಕೊಂಡು ಹೋಗಿಬಿಟ್ಟರು! ಆಗ ಆ ಕುಟುಂಬದವರ ಗೋಳನ್ನು ವರ್ಣಿಸಲಳವಲ್ಲ! ಪ್ರಿಯ ತಂಗಿಯು ಆಕಸ್ಮಿಕವಾಗಿ ಇಲ್ಲದಂತಾದದ್ದನ್ನು ನೋಡಿ, ಕಾಶೀನಾಥನು ದಿಙ್ಮೂಢನಾದನು. ಇಬ್ಬರೂ ಭಗಿನಿಯರು ತಂಗಿಯ ಗುಣಗಳನ್ನು ನೆನೆನೆನಿಸಿ ಗೋಳಿಟ್ಟರು. ಗಂಗಾಪ್ರಸಾದನ ಹರಣವೇ ನಡುನೆತ್ತಿಯಿಂದ ಹಾರಿ ಹೋದಂತಾಯಿತು. ಪ್ರಿಯತಮೆಯ ವಿರಹದಿಂದ ಅಯೋಧ್ಯಾನಾಥನ ಸ್ಥಿತಿಯು ಹೇಗಾಯಿತೆಂಬದನ್ನು ತಾರುಣ್ಯದ ಭರದಲ್ಲಿ ಪ್ರಿಯತಮೆಯನ್ನು ಅಗಲಿದ ತರುಣರೇ ಬಲ್ಲರಲ್ಲದೆ, ಅನ್ಯರು ಅರಿಯರು! ಬಾಲ್ಯಾವಸ್ಥೆಯಲ್ಲಿ ತಾಯಿಯ ವಿಯೋಗವೂ, ತಾರುಣ್ಯದಲ್ಲಿ ಗಂಡ-ಹೆಂಡಿರ ವಿಯೋಗವೂ ಮತ್ತು ವೃದ್ಧಾಪ್ಯದಲ್ಲಿ ಪುತ್ರವಿಯೋಗವೂ ಅಸಹ್ಯವಾದವುಗಳೆಂಬದು ಸುಳ್ಳಲ್ಲ. ಪ್ರಿಯಳ ಪಾತಿವ್ರತ್ಯದ ಬಗ್ಗೆ ಅಯೋಧ್ಯಾನಾಥ

ನಿಗೆ ತುಂಬಾ ವಿಶ್ವಾಸವಿತ್ತು. ಹಿಂದುವೇಳೆ ಅಂಥ ವ್ರತಭಂಗವಾಗುವ ಸಮಯವು ಒದಗಿದಲ್ಲಿ ನಿಶ್ಚಯವಾಗಿ ಅವಳು ಆತ್ಮಹತ್ಯೆಯನ್ನು ಮಾಡಿಕೊಳ್ಳುವಳೆಂಬದನ್ನೂ ಆತನು ಅರಿತಿದ್ದನು; ಆದರೆ ಆಕೆಯು ಸ್ಮೃತಿಯ ಮೇಲೆ ಇಲ್ಲದ ಸಮಯದಲ್ಲಿ-ನಿದ್ರಿತಳಾಗಿರುವ ಸಮಯ ದಲ್ಲಿ- ದುಷ್ಟರು ಎಲ್ಲಿ ತಮ್ಮ ಬಯಕೆಯನ್ನು ಈಡೇರಿಸುವರೋ ಎಂಬ ಕಲ್ಪನೆಯು ಆತನನ್ನು ಬಾಧಿಸುತ್ತಿತ್ತು. ಏನೇ ಇರಲಿ, ಪ್ರಿಯಳ ಶೋಧವನ್ನು ಮಾಡುವದೇ ತನ್ನ ಆದ್ಯ ಕರ್ತವ್ಯವೆಂದು ನಿಶ್ಚಯಿಸಿದ ಅಯೋಧ್ಯಾನಾಥನು, ಎಲ್ಲರ ಅನುಮತಿಯನ್ನು ಪಡೆ ದನು ಮೊದಲೇ ವೀರರಾಗಿಯಾದ ಕಾಶೀನಾಥನು ತಂಗಿಯ ದುರ್ವಾರ್ತೆಯನ್ನು ಕೇಳಿ ಮತ್ತಿಷ್ಟು ವಿರಕ್ತನಾಗಿ, ತಂಗಿಯ ಶೋಧ ಕ್ಕೆಂದು ಅಯೋಧ್ಯಾನಾಥನ ಸಂಗಡಲೇ ಹೊರಟನು. ಹೀಗೆ ಆ ಈರ್ವರೂ ಮಾನಕುಮಾರಿಯ ಶೋಧಕ್ಕೋಸ್ಕರ ದೇಶದೇಶಗಳನ್ನು ಸಂಚರಿಸಲಾರಂಭಿಸಿದರು

ಇತ್ತ "ಚಿಂತೆಯೇ ಮುಪ್ಪು" ಎಂಬಂತೆ ಅಗಾಧ ಶೋಕಸಾಗ ರದಲ್ಲಿ ಮುಳುಗಿ ಹೋಗಿದ್ದ ಗಂಗಾಪ್ರಸಾದನು ಮುಪ್ಪಿನ ಮುದುಕ ನಂತೆ ಕಾಣಹತ್ತಿದನು ದಿನೇದಿನೇ ಆತನು ಅನ್ನ-ನೀರುಗಳನ್ನು ತ್ಯಜಿಸಿದನು. ಸ್ವಲ್ಪಾವಧಿಯಲ್ಲಿಯೇ ನಡುವಯಸ್ಸಿನ ಗಂಗಾಪ್ರಸಾ ದನು ಚಿಂತಾನಲದಿಂದ ಬೆಂದವನಾಗಿ, ತೊಂಬತ್ತು ವರುಷದ ಮುದುಕನಂತೆ ಹಾಸಿಗೆಯನ್ನೇ ಹಿಡಿದನು!

---

## ಅಕ್ಕ-ತಂಗಿಯರು!

ಅಯೋಧ್ಯೆಯ ವಾಯುವ್ಯಕ್ಕಿರುವ ಸೀತಾಪುರ ಜಿಲ್ಲೆಯಲ್ಲಿಯ ಬಹುತರ ಎಲ್ಲ ಜಮೀನದಾರರು ಪ್ರಸಿದ್ಧರೀತಿಯಿಂದ ಬಂಡು ಮಾಡ ಲಿಕ್ಕೆ ಸಜ್ಜಾಗಿದ್ದರು. ಬಾದಶಹನ ತಾಲೂಕದಾರ-ತಹಸೀಲದಾರ ಮುಂತಾದ ಅಧಿಕಾರಿಗಳಿಗೆ ಸೀತಾಪುರದಲ್ಲಿ ಕಾಲು ಹಾಕಲಿಕ್ಕೆ ಸಹ ಧೈರ್ಯವಾಗುತ್ತಿದ್ದಿಲ್ಲ. ಈ ಸೀತಾಪುರದ ಜಮೀನದಾರರಲ್ಲಿ ದಿಗ್ವಿ ಜಯಸಿಂಹನೆಂಬ ಉಂಬಳಿಗಾರನು ಪ್ರಮುಖನಿದ್ದನಷ್ಟೇ? ಮಹಾ

ರಾಜಾ ದಿಗ್ವಿಜಯಸಿಂಹನು ಕರ್ಡಗಲಿಯಿದ್ದನು ಎಲ್ಲ ಜನರೂ ಬಹುಶಃ ಆತನನ್ನೇ ಸಿಂಹಾಸನದ ರಾಜನೆಂದು ನಂಬಿ, ಆತನಿಗೆ ಯೋಗ್ಯ ಮಾನ-ಮರ್ಯಾದೆಗಳನ್ನು ಮಾಡುತ್ತಿದ್ದರು ಬರಬರುತ್ತ ದಿಗ್ವಿಜಯಸಿಂಹನ ಪ್ರಸ್ಥವು ಬೆಳೆದು, ಕಡೆಗೆ ಅವನ ಬಂಡನ್ನು ಮುರಿಯಲಿಕ್ಕೆ ಬಾದಶಹ ಗಾಝಿಉದ್ದೀನ ಹೈದರನು ತನ್ನ ಬಾದಶಾಹೀ ಸೈನ್ಯವನ್ನು ಕಳುಹಿಸಬೇಕಾಯಿತು ದಿಗ್ವಿಜಯಸಿಂಹನಾದರೂ ಎಷ್ಟೋ ದಿವಸಗಳ ವರೆಗೆ ಬಾದಶಹನ ಸಂಗಡ ಹೋರಾಡಿ, ಕಡೆಗೆ ವೀರಸ್ವರ್ಗವನ್ನು ಹೊಂದಿದನೆಂಬ ಸಂಗತಿಯು ವಾಚಕರ ಸ್ಮರಣೆಯಲ್ಲಿರಬಹುದು

ದಿಗ್ವಿಜಯಸಿಂಹನ ವಾಡೆಯು ಬಹು ಭವ್ಯವಾಗಿ ಇತ್ತು. ಅದರ ಸುತ್ತಲೂ ಪ್ರಶಸ್ಥವಾಗಿ ಭದ್ರವಾದ ಗೋಡೆಗಳಿದ್ದು, ನಾಲ್ಕು ದಿಕ್ಕಿಗೂ ನಾಲ್ಕು ಭವ್ಯವಾದ ಸಿಂಹದ್ವಾರಗಳಿದ್ದವು ಉತ್ತರ ದಿಕ್ಕಿನ ಸಿಂಹದ್ವಾರದಿಂದ ಪ್ರವೇಶಿಸಿದ ಕೂಡಲೆ ಮೊದಲು ಎದುರಿಗೆ ಒಂದು ಪೇಟೆಯು ಹತ್ತುತ್ತಿತ್ತು. ಪಶ್ಚಿಮದ ಕಡೆಗೆ ಭವ್ಯಮಂದಿರಗಳೂ, ರಮ್ಯದೇವಾಲಯಗಳೂ ಮತ್ತು ಪ್ರಶಾಂತವಾದ ಸಾಧು-ಸಂನ್ಯಾಸಿಗಳ ಮಠಗಳೂ ಇದ್ದವು ದಕ್ಷಿಣದ ಕಡೆಗೆ ಸೇವಕ-ರಯುತರ ಮನೆಗಳೂ ಇದ್ದವು. ಪೂರ್ವಭಾಗದಲ್ಲಿ ಮುಖ್ಯ ಸೈನ್ಯದ ವಸ್ತಿಯಿತ್ತು. ಕೋಟೆಯ ಒಳಭಾಗದ ಈ ನೋಟವನ್ನು ನೋಡಿದರೆ, ಹೊಸಬನಿಗೆ ಇದೊಂದು ಅಚ್ಚುಕಟ್ಟಾದ ಪುಟ್ಟ ಪಟ್ಟಣವೆಂಬಂತೆ ಭಾಸವಾಗುತ್ತಿತ್ತು! ಸೈನ್ಯದ ಛಾವಣಿಯಿಂದ ಸುಮಾರು ಎಂಡು ನೂರು ಮೊಳದ ಮೇಲೆ ಪಶ್ಚಿಮದ ಕಡೆಗೆ ಮಹಾರಾಜಾ ದಿಗ್ವಿಜಯಸಿಂಹನ ಲಾಯವಿತ್ತು. ಈ ಲಾಯವು ಸದಾ ಅನೇಕ ಕುದುರೆ ಮುಂತಾದ ಪಶುಗಳಿಂದ ಪರಿಪೂರ್ಣವಾಗಿರುತ್ತಿತ್ತು ಮಧ್ಯದಲ್ಲಿ ಪ್ರಶಸ್ತವಾದ ಮಹಾರಾಜಾ ದಿಗ್ವಿಜಯಸಿಂಹನ ಖಾಸ ಮಹಾಲವಿತ್ತು. ಅದಕ್ಕೆ ಮಹಾಲು ಅನ್ನುವದಕ್ಕಿಂತ, ಅರಮನೆಯೆಂದರೆ ಹೆಚ್ಚು ಶೋಭಿಸುತ್ತಿತ್ತು. ಪೂರ್ವಾಭಿಮುಖವಾದ ಆ ಮೂರಂತಿಸ್ತಿನ ಅರಮನೆಯು ನೋಟಕ್ಕೆ ಬಹು ರಮ್ಯವಾಗಿ ಕಾಣುತ್ತಿದ್ದಂತೆ ಬಹು ಪ್ರಶಸ್ಥವೂ ಆಗಿತ್ತು. ಮಹಾಲಿನ ದ್ವಾರವನ್ನು ಪ್ರವೇಶಿಸಿದ ಕೂಡಲೆ ಬಲಗಡೆಗೆ ಕಾರಕೂನರು ಕೂಡ್ರುವ ಕಟ್ಟೆಯೂ, ಎಡಗ

ಡೆಗೆ ಸೇವಕ ಜನರು ಕುಳಿತಿರುವ ಕಟ್ಟೆಯೂ ದೃಷ್ಟಿಗೆ ಬೀಳುತ್ತಿದ್ದವು. ಎದುರಿಗೆ ಭವ್ಯವಾದ ಸದರ ಕಟ್ಟೆಯು ಇದ್ದು, ಗೋಡೆಗಳಿಗೆ ನಾನಾತರದ ಬಣ್ಣವನ್ನು ಕೊಟ್ಟಿದ್ದರು. ಸುತ್ತಲೂ ಹಿಂದಿನ ಶೂರ ಪುರುಷರ ಚಿತ್ರಗಳನ್ನು ತೂಗ ಹಾಕಿದ್ದು, ನಟ್ಟನಡುವೆ ಒಂದು ಭವ್ಯವಾದ ರಾವುಕನ್ನಡಿಯನ್ನು ಹಾಕಿದ್ದರು. ಅಲ್ಲಲ್ಲಿಗೆ ಸಾಧುಪುರುಷರ ಸಾಧುವಚನಗಳನ್ನು ಸುಂದರ ಅಕ್ಷರಗಳಿಂದ ಬರೆದು ಗೋಡೆಗೆ ಅಂಟಿಸಿದ್ದರು. ತೇಗು-ದೇವದಾರುಗಳ ತೊಲೆ-ಕಂಬಗಳಲ್ಲಿ ಶಿಲ್ಪಿಗರು ನಾನಾತರದ ಚಿತ್ರವಿಚಿತ್ರಗಳನ್ನು ಕೊರೆದಿದ್ದರು. ಒಳಗೆ ಹೋಗತಕ್ಕ ಬಾಗಿಲದ ಚೌಕಟ್ಟಿನ ಮೇಲ್ಭಾಗದಲ್ಲಿ ಭವ್ಯಮಂಗಲಮೂರ್ತಿಯೂ, ಉಳಿದ ಕೌಶಲ್ಯವೂ ಪ್ರೇಕ್ಷಕರ ಚಿತ್ತವನ್ನು ಆಕರ್ಷಿಸುತ್ತಿದ್ದವು. ಸದರಿನ ಒಂದು ಭಾಗದಲ್ಲಿ ಕೆಂಪು ಜಾಜಮು ಹಾಸಿದ್ದು, ಅಲ್ಲಲ್ಲಿಗೆ ಲೋಡು-ತಕ್ಕಿಗಳನ್ನು ಇಟ್ಟಿದ್ದರು. ಮತ್ತೊಂದು ಕಡೆಗೆ ಕೃಷ್ಣಾಜಿನಗಳು ವ್ಯವಸ್ಥಿತವಾಗಿ ಹಾಸಲ್ಪಟ್ಟಿದ್ದವು. ನಡುವಿನ ಮಹಾಲಿನ ಬಾಗಿಲವನ್ನು ಪ್ರವೇಶಿಸಿದ ಕೂಡಲೆ ಬಲಗಡೆಗೆ ಮೇಲುಪ್ಪರಿಗೆಯನ್ನು ಹತ್ತತಕ್ಕ ಏಣಿಯ ಬಾಗಿಲವೂ, ಎಡಗಡೆಗೆ ಒಂದು ಗುಪ್ತದ್ವಾರದ ಬಾಗಿಲವೂ ಇದ್ದವು. ಒಳಗಿನ ಮಹಾಲಿನಲ್ಲಿ ವಿಶೇಷ ಪ್ರಕಾಶವು ಬೀಳಬೇಕೆಂದು ಮಧ್ಯದಲ್ಲಿ ನಡನಡುವೆ ಕಬ್ಬಿಣ ಗಜಗಳನ್ನು ಹಾಕಿದ ಪ್ರಶಸ್ತವಾದ ಬೆಳಕಿಂಡಿಯನ್ನು ಬಿಟ್ಟಿದ್ದರು. ನಡುವಿನ ಮಹಾಲಿನ ಎಡಗಡೆಗೆ ಭವ್ಯವಾದ ಪಾಕಶಾಲೆಯೂ, ಹತ್ತಿರವೇ ದೇವಮಂದಿರವೂ ಕಂಗೊಳಿಸುತ್ತಿದ್ದವು. ಮತ್ತು ಬಲಗಡೆಗೆ ದಿಗ್ವಿಜಯಸಿಂಹನ ವಿಲಾಸಮಂದಿರವಿತ್ತು. ಹಿಂದಿನಮಗ್ಗಲು ಉಗ್ರಾಣದ ಖೋಲಿಯಿದ್ದು, ಹತ್ತರವೇ ಮಜ್ಜನಶಾಲೆಯಿತ್ತು. ಮಜ್ಜನಶಾಲೆಯು ಹತ್ತರ ಕಲ್ಲುಗಳಿಂದ ಕಟ್ಟಿದ ಭಾವಿಯೊಂದಿತ್ತು. ಇವೆಲ್ಲವುಗಳ ಹಿಮ್ಮಗ್ಗಲು ದಿಗ್ವಿಜಯಸಿಂಹನ ವಿಹಾರದ ಪುಷ್ಪವನವಿತ್ತು. ಗುಲಾಬಿ, ಸಂಪಿಗೆ, ಸೇವಂತಿಗೆ, ಬಕುಲ, ಚಂಪಕ, ಪಾರಿಜಾತ ಮತ್ತು ನಾನಾತರದ ಮಲ್ಲಿಗೆ ಮುಂತಾದವುಗಳ ವೃಕ್ಷ-ಲತೆಗಳಿಂದ ಸದಾ ಶೋಭಿತವಾದ ಆ ರಮ್ಯ ವಿಶ್ರಾಂತಿವನವನ್ನು ವರ್ಣಿಸುವದು ಅಶಕ್ಯವೇ ಸರಿ!

ಆ ಭವ್ಯವಾದ ವಾಡೆಯನ್ನು ಬಿಟ್ಟು, ದಿಗ್ವಿಜಯಸಿಂಹನು

ಲೋಕಾಂತರಕ್ಕೆ ತೆರಳಿದಂದಿನಿಂದ, ಮೂಗಿಲ್ಲದ ಮುಖದಂತೆ ಅದು ಅಮಂಗಲವಾಗಿತ್ತು. ಮಹಾಲಿನ ಗೋಡೆಗಳ ಮೇಲೆ ಅಲ್ಲಲ್ಲಿಗೆ ಧೂಳ ಮುಸುಕಿದ್ದು, ಅವಾರದ ಗೋಡೆಗಳು ಕೆಲವು ಕಡೆಯಲ್ಲಿ ಬೀಳತೊಡಗಿದ್ದವು. ಮೂಲಿ-ಮೂಲಿಗೆ ಕಸವು ಬಿದ್ದಿದ್ದು, ಅಂಗಣದಲ್ಲಿ ಅಲ್ಲಲ್ಲಿಗೆ ಹುಲ್ಲು ಬೆಳೆದಿತ್ತು. ದಿಗ್ವಿಜಯಸಿಂಹನು ಮರಣ ಹೊಂದಿದ ತರುವಾಯ ಪಾರ್ವರು ತಿಂಗಳುಗಳ ವರೆಗೆ ಆ ಮುಖ್ಯ ಮಹಾಲಿನಲ್ಲಿ ಯಾರೂ ಇದ್ದಿದ್ದಿಲ್ಲ; ಆದರೆ ಮುಂದೆ ಮಾನಕುಮಾರಿಯು ಅಡಗಿದಂದಿನಿಂದ ಗಂಗಾಪ್ರಸಾದನು ತನ್ನ ಇಬ್ಬರು ವಿಧವೆಯರಾದ ಮಕ್ಕಳೊಡನೆ ಅಲ್ಲಿಯೇ ಇರಹತ್ತಿದನು.

ಒಂದು ದಿವಸ ಮುಂಜಾವಿನ ಸಮಯ ಮಾಘ ಮಾಸವು. ಚಳಿಯ ಪ್ರಾಬಲ್ಯವು ಇನ್ನೂ ನಷ್ಟವಾಗಿದ್ದಿಲ್ಲ. ಭಗವಾನ್ ಸೂರ್ಯನಾರಾಯಣನು ಉದಯಿಸಿ, ಚಳಿಯನ್ನು ಹೊಡೆದೋಡಿಸಬೇಕೆಂದು ಒತ್ತರದಿಂದ ತನ್ನ ರಥವನ್ನು ಸಾಗಿಸಿದ್ದನು. ಸೀತಾಪುರದಲ್ಲಿಯ ಜನರು ತಮ್ಮ ನಿತ್ಯಕರ್ಮಗಳಲ್ಲಿ ತತ್ಪರರಾಗಿದ್ದಾರೆ ಮಹಾರಾಜಾ ದಿಗ್ವಿಜಯಸಿಂಹನ ಲಾಯದ ವ್ಯವಸ್ಥಾಪಕರು ತಮ್ಮ ತಮ್ಮ ಅನೇಕ ಕುದುರೆಗಳನ್ನು ಹೊರಗೆ ಬಿಡಲಾರಂಭಿಸಿರುತ್ತಾರೆ ರಯತರು ಎತ್ತುಗಳನ್ನು ಬಿಟ್ಟು, ರಂಟೆ-ಕುಂಟೆ ಮುಂತಾದ ಸಾಹಿತ್ಯಗಳೊಡನೆ ಹೊಲಗಳಿಗೆ ಸಾಗಿದ್ದಾರೆ. ಇಂಥ ಹೊತ್ತಿನಲ್ಲಿ ದಿಗ್ವಿಜಯಸಿಂಹನ ಮಧ್ಯಮಹಾಲಿನಲ್ಲಿ ಒಬ್ಬ ಮುದುಕನು ನೆರಳುತ್ತ ಮಂಚದ ಮೇಲೆ ಮಲಗಿದ್ದು, ಆತನ ಕಾಲ್ಬದಿಗೆ ಇಬ್ಬರು ಸ್ತ್ರೀಯರು ತಮ್ಮ ತಮ್ಮೊಳಗೆ ಏನೇನೋ ಗುಣುಗುಣುಸ್ತ್ರಕುಳಿತಿರುವರು. ಅವರ ಮುಖಚರ್ಯೆಯ ಮೇಲಿಂದಲೂ ಮಾತುಕಥೆಗಳ ಮೇಲಿಂದಲೂ ಅವರು ಪರಸ್ಪರ ಅಕ್ಕ-ತಂಗಿಯರೆಂಬುದು ತಟ್ಟನೆ ಹೊಳೆಯುತ್ತಿತ್ತು ಒಬ್ಬಳು ಸರಾಸರಿ ೧೮-೧೯ ವರುಷದವಳೂ, ಮತ್ತೊಬ್ಬಳು ಅವಳಿಗಿಂತ ಸುಮಾರು ಎರಡು ವರುಷ ಚಿಕ್ಕವಳೂ ಇರಬಹುದು. ಅವರ ಅವಯವಗಳು ಪ್ರಮಾಣಕ್ಕನುಸರಿಸಿದ್ದ ಮೂಲಕ, ಗೌರವರ್ಣದ ಆ ತರುಣಿಯರು ಬಹು ಸುಂದರವಾಗಿ ಕಾಣುತ್ತಿದ್ದರು. ಅವರ ಕೃಷ್ಣವರ್ಣದ ಉದ್ದವಾದ ಕೇಶಕಲಾಪಗಳೂ, ಭವ್ಯವಾದ ಲಲಾಟಗಳೂ, ಕೃಷ್ಣವರ್ಣದ ಧನುಷ್ಯಾಕೃತಿ ಹುಬ್ಬುಗಳೂ, ಕಪ್ಪಾದ ಕಣ್ಣುಗಳೂ,

ಗುಲಾಬಿಯ ಗಲ್ಲಗಳೂ ಇದ್ದು, ಸರಳ ನಾಸಿಕವುಳ್ಳ ಆ ತರುಣಿಯರು ನಯನಮನೋಹರರಾಗಿದ್ದರು. ಅವರ ಹುತ್ತಬಂದ ಕುಚಗಳೂ, ತುಂಬಿದ ನಿತಂಬಗಳೂ, ಸೂಕ್ಷ್ಮಕಟಿಪ್ರದೇಶವೂ, ಬಾಳೆಯ ದಿಂಡಿನಂಥ ತೊಡೆಗಳೂ ಚಿತ್ತಾಕರ್ಷಕವಾಗಿದ್ದವು. ಗುಲಾಬಿಯ ಹೂವಿನ ಬಣ್ಣವನ್ನು ನಾಚಿಸುವ ಆ ಲಲನಾಮಣಿಯರ ತಳಪಾದಗಳು ಅವರ ಜಗಭ್ಭ ಶ್ರೀಮಂತಿಕೆಯನ್ನು ತೋರ್ಪಡಿಸುತ್ತಿದ್ದವು. ಎಷ್ಟು ಶ್ರೀಮಂತಿಕೆಯು ಇದ್ದು ಮಾಡುವದೇನು? ಸ್ತ್ರೀಯರಿಗೆ ಮುಖ್ಯಾಲಂಕಾರವಾದ ಕುಂಕುಮತಿಲಕವು ಅವರ ಲಲಾಟಪ್ರದೇಶದಲ್ಲಿ ಶೋಭಿಸದ್ದರಿಂದ, ಹಿಮಕರನಿಲ್ಲದ ಆಕಾಶದಂತೆ ಅವರ ಮುಖಮಂಡಲವು ಹಾಳು ಸುರಿಯುತ್ತಿತ್ತು. ಅವರಲ್ಲಿ ಹಿರಿಯವಳು ಶರೀರದಿಂದ ಕಿಂಚಿತ್ ಸ್ಥೂಲಳಿದ್ದಳು. ಅವರೀರ್ವರಲ್ಲಿ ಹಿರಿಯಳ ಗಂಭೀರ ಮುಖಚರ್ಯದ ಮೇಲಿಂದಲೂ, ಚಿಕ್ಕವಳ ಪುಳ್ಕ ಮುಖಚರ್ಯದ ಮೇಲಿಂದಲೂ ನೋಡಲು, ಅಕ್ಕನು ಧೈರ್ಯವಂತಳೆಂದು ತಟ್ಟನೆ ಹೇಳಿಯುತ್ತಿತ್ತು.

ಮೇಲೆ ವರ್ಣಿಸಿದ ಈ ಸುಂದರ ತರುಣಿಯರು ಯಾರಿರಬಹುದೆಂಬದು ಜಾಣಾಕ್ಷ ವಾಚಕರಿಗೆ ಹೇಳಿದಿರಬಹುದು. ಅವರಲ್ಲಿ ಚಿಕ್ಕವಳು-ಚಾಂದಕುಮಾರಿಯು, ರೋಗಿಯ ಕಾಲುಗಳನ್ನು ಹಿಚಕುತ್ತ ಹಿಚಕುತ್ತ ಚಿಂತಾಗ್ರಸ್ತಮುದ್ರೆಯಿಂದ: "ಅಕ್ಕಾ, ದೇವರು ನಮ್ಮ ಮೇಲೆ ಎಂಥ ಭಯಂಕರ ಸಂಕಟ ತಂದನಲ್ಲ? ಅನಾಥರಾದ ನಮ್ಮನ್ನೂ, ಪೂಜ್ಯನಾದ ಈ ವೃದ್ಧಪಿತನನ್ನೂ ಮರ್ಯಾದೆಯಿಂದ ರಕ್ಷಿಸತಕ್ಕವರು ಯಾರು? ಶಂಭೋ! ಅನಾಥರಾದ ನಮಗೆ ನಿನ್ನ ಹೊರತು ಅನ್ಯಗತಿಯಿಲ್ಲ ನಿನಗೆ ಅನನ್ಯಭಾವದಿಂದ ಶರಣು ಬಂದಿರುವೆವು. ನಮ್ಮನ್ನು ತಿರಸ್ಕರಿಸಬೇಡ!" ಎಂದು ಕಂಬನಿಗಳನ್ನು ದುರಿಸುತ್ತ ನುಡಿದಳು

ತಂಗಿಯ ಚಿಂತಾಗ್ರಸ್ತಸ್ಥಿತಿಯನ್ನು ನೋಡಿ, ಕಳವಳಗೊಂಡ ಅಕ್ಕನು-ನಾರಾಯಣಕುಮಾರಿಯು ನಿಶ್ಚಯಸ್ವರದಿಂದ ಅನ್ನುತ್ತಾಳೆ: "ತಂಗೀ ಚಂದಾ, ಹೀಗೆ ಚಿಂತಾಗ್ರಸ್ತಳಾಗಬೇಡಮ್ಮಾ! ನಮ್ಮ ಮೇಲೆ ಈಗ ದುರ್ಧರ ಸಮಯವು ಬಂದಿರುವದೇನೋ ನಿಜ; ಆದರೆ ಇಷ್ಟು ದಿವಸ ಬಂದ ಸಂಕಟಗಳಿಂದ ನಮ್ಮನ್ನು ಆ ಅನಾಥರಕ್ಷ

ಕನು ಪಾರು ಮಾಡಿದಂತೆ, ಈ ಸಂಕಟದಿಂದಲೂ ಪಾರು ಮಾಡ ಬಹುದು ಇದರಲ್ಲೇನೂ ಸಂಶಯವಿಲ್ಲ!''

"ಇಲ್ಲಿಯ ವರೆಗೆ ನಡೆಯುತ್ತ ಬಂದ ಪ್ರಸಂಗಗಳನ್ನು ನೋಡಿ ದ್ದರೆ, ಈ ಸಾರೆಯೂ ಶಂಭುವು ನಮ್ಮನ್ನು ನಿರಾಕರಿಸಿದಂತೆ ತೋರು ತ್ತದೆ'' ಎಂದು ತಂಗಿಯು ಅಧೀರತೆಯಿಂದ ನುಡಿದಳು.

"ಚಂದಾ, ದೀನಬಂಧುವಾದ ಆ ಕೈಲಾಸಪತಿಯು ಸದ್ಯದ ಸಂಕಟದೊಳಗಿಂದ ನಮ್ಮನ್ನು ಪಾರು ಮಾಡಲಿಕ್ಕಿಲ್ಲವೆಂದು ನಿನಗೆ ಅನಿಸುವದೋ? ಹಾಗೆ ಮಾತ್ರ ಎಂದಿಗೂ ಆಗಲಾರದು. ಎಂದಿ ನಂತೆ ಈ ಸಂಕಟದೊಳಗಿಂದಲೂ ನಾವು ಪಾರಾಗುವೆವು. ನೀನು ಸ್ವಲ್ಪವೂ ಚಿಂತೆಯನ್ನು ಮಾಡಬೇಡ ಸಂಕಟ ಪ್ರಸಂಗದಲ್ಲಿ ಆ ಅನಾಥರಕ್ಷಕನು ಧಾವಿಸಿ ಬಂದು, ನಿಶ್ಚಯವಾಗಿಯೂ ನಮಗೆ ಯೋಗ್ಯ ಮಾರ್ಗವನ್ನು ತೋರಿಸುವನು''

ಅಕ್ಕನ ಈ ಧೈರ್ಯದ ಮಾತುಗಳನ್ನು ಕೇಳಿ, ತಂಗಿಯು ಏನೂ ಮಾತಾಡಲಿಲ್ಲ ಆದರೂ ಅವಳ ಮನದಲ್ಲಿಯ ಚಿಂತೆಯು ಮಾತ್ರ ದೂರಾದಂತೆ ತೋರಲಿಲ್ಲ ಭೀತಿ, ಚಿಂತೆ ಹಾಗು ತ್ರಸ್ತ ಚಿತ್ತದಿಂದ ಅವಳು ಮನದಲ್ಲಿಯೇ ಶಂಭುವನ್ನು ಪ್ರಾರ್ಥಿಸುತ್ತಿರು ವಂತೆ ತೋರಿತು ಆಗ ನಾರಾಯಣ ಕುಮಾರಿಯು ಪುನಃ ಮಾತಾ ಡತೊಡಗಿದಳು: "ಬಲುಮೆಯ ಜನರಿಂದ ನಾವು ತಂದೆಯ ಸಂರಕ್ಷ ಣವನ್ನು ನಿಶ್ಚಯವಾಗಿ ಮಾಡಲಾಪೆವು. ಹೀಗೆ ನನ್ನ ಮನೋ ದೇವತೆಯು ನನಗೆ ಸ್ಪಷ್ಟವಾಗಿ ಹೇಳುತ್ತದೆ! ನೀನು ತಿಲಮಾತ್ರವೂ ಚಿಂತೆಗೊಳಗಾಗಬೇಡ; ತಂದೆಯವರು ಮೊದಲೇ ಈ ಮನೆಗೆ ಬರ ಲಿಕ್ಕೆ ಸಮ್ಮತಿಸಿದ್ದರೆ, ಮಾನಕುಮಾರಿಯ ಗತಿಯು ಹೀಗಾಗುತ್ತಿ ದ್ದಿಲ್ಲ. ಮಹಾರಾಜರ ಮೃತ್ಯುಸಮಯದಲ್ಲಿ ನಾನು ಸಹಗಮನ ಮಾಡಬೇಕೆಂದು ನಿಶ್ಚಯಿಸಿದ್ದೆನು; ಆದರೆ ಕೇವಲ ತಂದೆಯ ಸಂರ ಕ್ಷಣದ ಸಲುವಾಗಿ ಬದುಕಿದೆನು. ನೀನು ಚಿಂತೆಯನ್ನು ಬಿಟ್ಟು, ನಿರ್ಮಲಮನದಿಂದ ಆ ಪರಮಾತ್ಮನನ್ನು ಸ್ಮರಿಸು; ನಿಶ್ಚಯವಾಗಿ ಆತನು ಈ ಸಂಕಟದಿಂದ ನಮ್ಮನ್ನು ಪಾರು ಮಾಡುವನು!''

ಆ ಪರಮೇಶ್ವರನ ಹೊರತು ನಮಗೆ ಅನ್ಯರು ಯಾರು ಸಹಾ ಯಕರಿರುವರು? ಆದರೂ ನಮ್ಮ ಕೈಯಿಂದಾದಷ್ಟು ನಿವಾರಣೋ

ಪಾಯವನ್ನು ಮುಂಚಿತವಾಗಿಯೇ ಮಾಡಬೇಕಲ್ಲವೇ? ಯಾಕಂದರೆ ಆಯತಹೊತ್ತಿನಲ್ಲಿ ಮನಸ್ಸು ಗೊಂದಲದಲ್ಲಿ ಬಿದ್ದು, ಏನೂ ತಿಳಿಯಲಾರದು"

ನಾರಾಯಣ ಕುಮಾರಿಯು ಕಿಂಚಿತ್ ಹಾಸ್ಯಮುದ್ರೆಯಿಂದ ಇಂತು ಅಂದಳು: "ಬೇಕಾದಂಥ ಸಂಕಟ ಸಮಯವೊದಗಿದರೂ ನಾನು ಭ್ರಾಂತಳಾಗಲಾರೆನು"

ಅಕ್ಕನ ಹಾಸ್ಯಭಾವವು ಚಾಂದಕುಮಾರಿಯ ಮನಸ್ಸಿಗೆ ಬರಲಿಲ್ಲ ಅವಳು ವಿರಕ್ತವಾಣಿಯಿಂದ: "ಅಕ್ಕಾ, ಇದೇನು ವಿನೋದದ ವೇಳೆಯೇ? ಪ್ರತ್ಯಕ್ಷ ಶತ್ರುವು ಎದುರಿಗೆ ನಿಂತಿರುವಾಗ ಸಹ ನಿನಗೆ ನಗೆ ಬರುತ್ತದೋ?" ಎಂದು ನುಡಿದಳು

"ನಾನು ವಿನೋದವನ್ನೂ ಮಾಡುವದಿಲ್ಲ; ಮತ್ತು ನಗುವದೂ ಇಲ್ಲ. ನಾನು ನಿಶ್ಚಯವಾಗಿ ನಿನ್ನ ಮುಂದೆ ಇನ್ನೊಮ್ಮೆ ಹೇಳುತ್ತೇನೆ, ಕೇಳು ಸಂಕಟ ಸಮಯದಲ್ಲಿ ನಾನು ಸ್ವಲ್ಪವೂ ಅಂಜುವದಿಲ್ಲ"

"ಏನೋ ಅವ್ವಾ, ಏನೇನೋ ಮಾತಾಡುವಿ! ಅಯಿತು. ಸಂಕಟ ಸಮಯದಲ್ಲಿ ಮನುಷ್ಯನ ಬುದ್ಧಿಯು ಎಂದಾದರೂ ಸ್ಥಿರವಾಗಿ ಉಳಿಯಬಹುದೋ? ಎಂದೂ ಉಳಿಯಲಾರದು."

"ನೀನು ಅನ್ನುವಂತೆ ಏನೇನೋ ಸುಳ್ಳೊಂದು-ಸೊಟ್ಟೊಂದು ನಾನು ಎಂದೂ ಮಾತಾಡುವದಿಲ್ಲ; ನನ್ನ ಮನಸ್ಸು ಸಂಕಟ ಸಮಯದಲ್ಲಿಯೂ ಸ್ಥಿರವಾಗಿ ಉಳಿಯಲಿಕ್ಕೆ ಒಂದು ಆಶ್ಚರ್ಯಕಾರಕ ಸಂಗತಿಯು ಕಾರಣವಾಗಿರುವದು ಆದು ನಿನಗೆ ನಿಜವೆನಿಸಲಾರದು. ನಾನು ಹೇಳಿದ್ದರ ಮೇಲೆ ಕದಾಚಿತ್ ನಿನ್ನ ವಿಶ್ವಾಸವೂ ಕೂಡ್ರಲಾರದು."

"ಆದರೆ ಅದನ್ನು ಹೇಳು, ನೋಡೋಣ!"

"ಅದನ್ನು ಕೇಳಿ ನೀನು ಏನು ಮಾಡುವಿ?"

'ಯೋಗ್ಯಕಾರಣವಿದ್ದರೆ ತುಸ ಧೈರ್ಯವಾದರೂ ಬಂದೀತು

ತಂಗಿಯ ಅತ್ಯಂತ ಆಗ್ರಹವನ್ನು ನೋಡಿ, ನಾರಾಯಣ ಕುಮಾರಿಯು ಹೇಳತೊಡಗಿದಳು:—"ಹಾಗಾದರೆ ಹೇಳುವೆನು, ಕೇಳು ಅವರು ದೇವಲೋಕಕ್ಕೆ ಹೋದ ದಿವಸದಿಂದ ನಾನು ಮೇಲಿಂದ ಮೇಲೆ ಒಂದು ಅದ್ಭುತ ಚಮತ್ಕಾರವನ್ನು ನೋಡುತ್ತ

ರುವೆನು! ಈ ಅದ್ಭುತ ಸಂಗತಿಯ ಮರ್ಮವು ನನಗೆ ಸಂಪೂರ್ಣ ಗೊತ್ತಾಗದಿದ್ದರೂ, ಆ ಸಂಗತಿಯು ಸಂಭವಿಸುವದು ಮಾತ್ರ ನಿಜ ಅಸ್ತು. ಅವರು ಸಂಗ್ರಾಮದಲ್ಲಿ ಮಡಿದ ಕರ್ಣಕಠೋರ ವಾರ್ತೆಯು ನನ್ನ ಕಿವಿಗೆ ಬಿದ್ದ ಕೂಡಲೆ, ನಾನು ಅತ್ಯಂತ ಶೋಕಾಕುಲಳಾದೆನು. ಅವರ ಸಂಗಡ ಇಲ್ಲವೆ ಅವರ ಪಾದುಕೆಯ ಸಂಗಡವಾದರೂ ಸಹ ಗಮನವನ್ನು ಮಾಡಿ, ಈ ಅಸಹ್ಯ ದುಃಖದ ಅಂತವನ್ನು ಮಾಡಿ ಬಿಡಬೇಕೆಂದು ಪೂರ್ಣ ನಿಶ್ಚಯಿಸಿದ್ದೆನು; ಆದರೆ ಚಂದಾ, ಸೋಜಿಗವನ್ನು ಏನು ಹೇಳಲಿ! ಆಕಸ್ಮಿಕವಾಗಿ ಯಾವದೋ ಒಂದು ದಿವ್ಯಾಕೃತಿಯ ದೇವತೆಯು ನನ್ನ ಎದುರಿಗೆ ನಿಂತು, ನಾನು ಮಾಡಿದ ಮನೋನಿಶ್ಚಯವನ್ನು ತಿರುಗಿಸುವದಕ್ಕೋಸ್ಕರ ನಾನಾಪರಿಯ ಬೋಧವಚನಗಳನ್ನು ಉಪದೇಶಿಸಲಾರಂಭಿಸಿತು ಕಟ್ಟಕಡೆಗೆ ಆ ದೇವತೆಯು ನಿಶ್ಚಯಸ್ವರದಿಂದ ಹೇಳಿದ್ದೇನಂದರೆ: "ಉಳಿದ ರಗಳೆಯೊತ್ತಟ್ಟಗಿರಲಿ; ನೀನು ನಿನ್ನ ತಂದೆಯ ಸಲುವಾಗಿಯಾದರೂ ದೇಹತ್ಯಾಗವನ್ನು ಮಾಡಬೇಡ! ನೀನು ಸಹಗಮನ ಮಾಡುವದರಿಂದ ಈ ದುಃಖದೊಳಗಿಂದ ಪಾರಾಗುವದೇನೋ ನಿಜ; ಇದರಿಂದ ನಿನ್ನ ತಂದೆಯು ಮಾತ್ರ ದುರ್ದೆಶೆಯನ್ನು ಹೊಂದುವನು!" ದೇವತೆಯ ಆಜ್ಞೆಯನ್ನು ಉಲ್ಲಂಘಿಸಲಿಕ್ಕೆ ನಾನು ಅಸಮರ್ಥಳಾದೆನು ಮುಂದೆ ಕೆಲವು ದಿವಸಗಳು ಕಳೆದ ಬಳಿಕ ಮತ್ತೊಂದು ಚಮತ್ಕಾರವಾಯಿತು! ಒಮ್ಮೆ ಬಾದಶಹನ ಸೈನ್ಯವು ಈ ಭಾಗದ ಕಡೆಗೆ ರಯತರನ್ನು ಪೀಡಿಸುವ ಉದ್ದೇಶದಿಂದ ಬಂದಿತ್ತು. ಆ ಕ್ರೂರ ನರಪಶುಗಳ ಭಯಂಕರ ಛಲನೆಗೆ ಹೆದರಿ, ನಮ್ಮ ಸೈನಿಕರೆಲ್ಲರೂ ಓಡಿ ಹೋದರು. ಆ ರಾಕ್ಷಸರಿಂದ ರಕ್ಷಣವಾಗತಕ್ಕ ಅನ್ಯಉಪಾಯಗಳು ತೋಚದ್ದರಿಂದ, ಧರ್ಮಸಂರಕ್ಷಣಕ್ಕಾಗಿ ನಾನು ಆಗ ಭಾಗೀರಥಿಯಲ್ಲಿ ಹಾರಿಕೊಂಡೆನು; ಆದರೆ ನಾನು ಮೂರ್ಛಾವಸ್ಥೆಯಲ್ಲಿದ್ದಾಗ ನನ್ನನ್ನು ಈ ಕೋಣೆಯಲ್ಲಿ ತಂದು ಯಾರು ಮಲಗಿಸಿದರೆಂಬದು ನನಗೆ ಇಂದಿನ ವರೆಗೂ ಗೊತ್ತಾಗಲೊಲ್ಲದು! ಎಚ್ಚರವಾದ ಮೇಲೆ ನೋಡುತ್ತೇನೆ, ಭಾಗೀರಥಿಯಲ್ಲಿ ಹಾರಿಕೊಂಡ ನಾನು, ನನ್ನ ಕೋಣೆಯಲ್ಲಿ ಮಲಗಿರುವೆನು! ಆಗ ನಾನು ಚಕಿತಳಾದೆನು! ಗಂಗಾರ್ಪಣಳಾದ ನನ್ನನ್ನು ಇಲ್ಲಿ ಯಾರು ತಂದರು? ನನಗೆ ಜೀವದಾನ ಕೊಟ್ಟ

ವರಾರು? ಇತ್ಯಾದಿ ಪ್ರಶ್ನೆಗಳನ್ನು ಮಹಾಲಿನೊಳಗಿನ ಪ್ರತಿಯೊಬ್ಬ ಸೇವಕನಿಗೆ ಕೇಳಿದೆನು; ಒಬ್ಬರೂ ಉತ್ತರ ಕೊಡಲಿಲ್ಲ ಆ ಮೇಲೆ ಯಾದರೂ ನಾನಾಸಂಕಟ ಸಮಯಗಳಲ್ಲಿ ನಾನು ಅತ್ಯಂತ ಹತಾಶಳಾಗುತ್ತಿದ್ದಾಗಲೂ, ಸಂಕಟ ನಿವಾರಣೋಪಾಯದ ಕಲ್ಪನೆಯು ಬಾರದೆ ಚಿಂತಾವ್ಯಾಕುಲಳಾಗಿ ಅಸ್ವಸ್ಥವಾಗುತ್ತಿದ್ದಾಗಲೂ, ಆ ದೈವೀವಿಭೂತಿಯೇ ನನಗೆ ದರ್ಶನ ಕೊಟ್ಟು ತರಣೋಪಾಯವನ್ನು ಸೂಚಿಸುತ್ತಿದ್ದಿತು ಸದ್ಯಕ್ಕೆ ನಮ್ಮ ಮೇಲೆ ದುರ್ಧರ ಪ್ರಸಂಗವು ಬಂದದ್ದರಿಂದ ನಾನು ಅಸ್ವಸ್ಥಳಾಗಿದ್ದೆನು. ನಿನ್ನಿನ ದಿವಸ ಕಣ್ಣಿಗೆ ಕಣ್ಣು ಸಹ ಹತ್ತಲಿಲ್ಲ. ಆಗ ನಾನು ಚತುರ್ಥಪ್ರಹರಿನಲ್ಲಿ ಎದ್ದು, ಸ್ನಾನಮಾಡಿ, ಶ್ರೀ ಸೀತಾರಾಮನ ಮಂದಿರದಲ್ಲಿ ರಾಮನಾಮದ ಜಪ ಮಾಡುತ್ತ ಕುಳಿತಿದ್ದೆನು ಇಡಿ ರಾತ್ರಿಯೆಲ್ಲ ನಿದ್ದೆಯಿಲ್ಲದ್ದರಿಂದ, ನನಗೆ ರಾಮನಾಮವನ್ನು ಜಪಿಸುತ್ತ ಜಪಿಸುತ್ತ ತುಸ ಜಂಪು ಹತ್ತಿತು. ಕೂಡಲೆ ಆ ದೈವೀವಿಭೂತಿಯು ಪ್ರಕಟವಾಯಿತು! ಆಗ ನಾನು ಭಕ್ತಿಯಿಂದ ಚರಣಕ್ಕೆರಗಿದೆನು. ನನ್ನ ಬೆನ್ನ ಮೇಲೆ ಪ್ರೀತಿಯಿಂದ ಕೈಯಾಡಿಸುತ್ತ ಅಭಯವಚನಗಳಿಂದ ಆ ವಿಭೂತಿಯು: "ಬೇಟಾ, ಅಂಜಬೇಡ! ಈ ಸಂಕಟದೊಳಗಿಂದ ನಿಮ್ಮನ್ನು ಪ್ರಭು ರಾಮಚಂದ್ರನು ಪಾರು ಮಾಡಬಲ್ಲನು ನಾಳಿನ ದಿವಸ ಸಾಯಂಕಾಲದ ಸುಮಾರಿಗೆ ಇಂಗ್ಲಿಷರ ಸೈನ್ಯವು ವಿಜಯಗಂಜದ ಹತ್ತರ ಬರುವದು. ಆಗ್ಗೆ ನೀನು ಸ್ವತಃ ಸೈನ್ಯವನ್ನು ತೆಗೆದುಕೊಂಡು ಹೋಗಿ ಆ ಆಂಗ್ಲಸೈನ್ಯವನ್ನು ಅದಷ್ಟು ತಡೆ. ಸ್ವಲ್ಪ ಹೊತ್ತಿನಲ್ಲಿ ನಿನ್ನ ಜನರು ಓಡಹತ್ತುವರು ಆಗ ಅವರಿಗೆ ಉತ್ತರಕ್ಕೆ ಓಡಿ ಹೋಗಲಿಕ್ಕೆ ಹೇಳು."

ಚಾಂದಕುಮಾರಿಯು ಅಕ್ಕನು ಹೇಳುತ್ತಿದ್ದ ಮೇಲಿನ ಈ ಕಥೆಯನ್ನು ಅತ್ಯಂತ ಆಸ್ಥೆಯಿಂದಲೂ, ಸಾಶ್ಚರ್ಯದಿಂದಲೂ ಕೇಳುತ್ತಿದ್ದಳು ನಾರಾಯಣ ಕುಮಾರಿಯು ಸೈನ್ಯವನ್ನು ತೆಗೆದುಕೊಂಡು ಸ್ವತಃ ಸಮರಾಂಗಣದ ಮೇಲೆ ಹೋಗಬೇಕೆಂದು ಮಾಡಿರುವದನ್ನು ಆಕೆಯ ಮುಖದಿಂದಲೇ ಕೇಳಿದ ಬಳಿಕಂತೂ ಅವಳು ಅತ್ಯಂತ ಭಯಗ್ರಸ್ತಳಾಗಿ ನಡುವೇ ಬಾಯಿ ಹಾಕಿ ಅನ್ನುತ್ತಾಳೆ: "ಅಕ್ಕಾ, ಅಂದಮೇಲೆ ನೀನು ಸ್ವತಃ ದಂಡು ತಕ್ಕೊಂಡು ಹೋಗತಕ್ಕವಳೋ?

ಅದು ಮಾತ್ರ ಎಂದಿಗೂ ಆಗದು? ಏನಾದರೂ ಆಗಲಿ ನಾನು ಮಾತ್ರ ನಿನ್ನನ್ನು ಅತ್ತ ಹೋಗಗೊಡಲಾರೆನು. ಆ ಭಯಂಕರ ಮುಸಲ್ಮಾನ-ಫಿರಂಗೀಯ ದುಷ್ಟ ರಾಕ್ಷಸರ ಕೈಯಲ್ಲಿ ನೀನು ಸಿಕ್ಕರೆ, ಆ ಚಾಂಡಾಲರು ಎಂಥ ವಿಟಂಬನೆಯನ್ನು ಮಾಡಬಹುದು? ಆ ಅಧಮಾಧಮರ ಕೈಯಿಂದ ನಿನ್ನ ಮರ್ಯಾದೆಯನ್ನು ಕಾಯ್ದುಕೊಳ್ಳುವದು ಶಕ್ಯವಾದರೂ ಇರುವದೋ?''

"ಏನೇ ಆಗಲಿ, ನಾನು ಸ್ವತಃ ಸೈನ್ಯವನ್ನು ತೆಗೆದುಕೊಂಡು ಹೋಗತಕ್ಕವಳೇ! ದೇವತೆಯ ಆಜ್ಞೆಯನ್ನು ನಾನು ಉಲ್ಲಂಘಿಸಲಾರೆನು!''ಎಂದು ನಾರಾಯಣಕುಮಾರಿಯು ಗಂಭೀರಸ್ವರದಿಂದಂದಳು.

"ನೀನು ಸ್ವರ್ಗದಲ್ಲಿಯ ಯಾವದೊಂದು ದೇವತೆಯು ದರ್ಶನವನ್ನು ಕೊಟ್ಟು, ಅಭಯವನ್ನೀಯುತ್ತಿರುವದೆಂದು ಅನ್ನುವಿಯಲ್ಲವೆ? ಅದೆಲ್ಲ ನಿನ್ನ ಭ್ರಮೆಯೆಂಬಂತೆ ತೋರುತ್ತದೆ. ಅಲ್ಲೇ ಅಕ್ಕಾ, ಇವೆಲ್ಲ ಕನಸಿನಲ್ಲಿಯ ಸಂಗತಿಗಳು. ದುರ್ದೈವದ ತೊಡಕಿನಲ್ಲಿ ಸಿಕ್ಕ ನಮಗೆ ಹಾಗೆ ಭ್ರಮೆಯಾಗುತ್ತದೆ; ಅದರಲ್ಲೇನೂ ತಥ್ಯವಿಲ್ಲ.''

"ಚಂದಾ, ಮೊದಮೊದಲು ನನಗಾದರೂ ನಿನ್ನಂತೆಯೇ ಅನಿಸುತ್ತಿತ್ತು. ಈಗ ಮಾತ್ರ ಯಾವದೊಂದು ದೈವೀವಿಭೂತಿಯೇ ಸಂಕಟದೊಳಗಿಂದ ಉದ್ಧರಿಸುವದಕ್ಕೋಸ್ಕರ, ಮೇಲಿಂದ ಮೇಲೆ ದರ್ಶನ ಕೊಡುತ್ತಿರುವದೆಂದು ನನಗೆ ಪೂರ್ಣ ಮನವರಿಕೆಯಾಗಿದೆ ಯಾವನೋ ಒಬ್ಬ ನಮ್ಮ ಶುಭೇಚ್ಛುವಾದ ಮಹಾತ್ಮನು ದೇವತಾಪದಕ್ಕೆ ಮುಟ್ಟಿದ್ದು, ಆತನೇ ನಮ್ಮನ್ನು ಸಂಕಟಪರಂಪರೆಯೊಳಗಿಂದ ಪಾರುಮಾಡಲಿಕ್ಕೆ ಧಾವಿಸುತ್ತಿರಬಹುದೆಂದು ನನಗೆ ಅನಿಸುತ್ತದೆ ಹಾಗಿಲ್ಲದಿದ್ದರೆ, ಈಗಿನ ದುರ್ಧರಕಾಲದಲ್ಲಿ—ದರವಡೆಖೋರರೂ, ತಕ್ಕರೂ ದೇಶದಲ್ಲಿ ಹಾ-ಹಾಕಾರವನ್ನೆಬ್ಬಿಸಿರುವ ಸಮಯದಲ್ಲಿ, ಖುದ್ದ ಅಯೋಧ್ಯೆಯ ಬಾದಶಹನು ಪ್ರಜೆಗಳ ಮೇಲೆ ವರ್ಣಿಸಲಶಕ್ಯವಾದ ಘೋರ ಅತ್ಯಾಚಾರಗಳನ್ನು ನಡಿಸಿರುವ ವಿಪತ್ಕಾಲದಲ್ಲಿ— ನಮ್ಮಂಥ ಅನಾಥರ ರಕ್ಷಣೆಯು ಆಗುವ ಬಗೆ ಹೇಗೆ? ಆ ದೇವತೆಯ ಹೊರತಾಗಿ ನಮ್ಮನ್ನು ಅನ್ಯರು ರಕ್ಷಿಸತಕ್ಕವರಿರುವರೋ? ಈ ಅನರ್ಥಪರಂಪರೆಯ ಕಾಲದಲ್ಲಿ ನಮ್ಮಂಥ ಅಬಲೆಯರು ಒಂದು ಪ್ರಹರವಾದರೂ ಸುರಕ್ಷಿತವಾಗಿ ಇರಬಹುದೋ?''

"ಹೌದು, ನೀನನ್ನುವದಾದರೂ ಸುಳ್ಳಲ್ಲ. ಒಂದುವೇಳೆ ಪರಲೋಕವಾಸಿ ದೇವತೆಯು ನಿನಗೆ ದರ್ಶನ ಕೊಡುತ್ತಿದ್ದರೆ, ನಿಶ್ಚಯವಾಗಿ ನಮ್ಮ ಪರಮಪೂಜ್ಯ ತಾಯಿಯೇ ಇರಲಿಕ್ಕೆ ಬೇಕು. ತಾಯಿಯ ಹೊರತಾಗಿ ಇಷ್ಟು ಸ್ನೇಹವನ್ನು ಯಾರು ತೋರಿಸಬಹುದು? ಅವ್ವನು ನಿನ್ನ ಮೇಲೆ ಬಹು ಮಮತೆಯನ್ನು ಮಾಡುತ್ತಿದ್ದಳು; ಆಕೆಯೇ ನಿನಗೆ ಭೆಟ್ಟಿಯಾಗುತ್ತಿರಬಹುದು!"

"ಚಂದಾ, ನಾನಾದರೂ ಮೊದಮೊದಲು ನಿನ್ನಂತೆಯೇ ತಿಳಿದಿದ್ದೆನ: ಆದರೆ ಆ ದೈವೀವಿಭೂತಿಯು ಸ್ತ್ರೀವೇಷಧಾರಿಯಾಗಿರದೆ, ಪುರುಷವೇಷಧಾರಿಯಾಗಿದ್ದದರಿಂದ ಆ ನನ್ನ ಸಂದೇಹವು ಬಯಲಾಯಿತು"

"ಇಲ್ಲವಾದರೆ, ನಿನಗೆ ಏನಾದರೊಂದು ಭಾಸವಾಗುತ್ತಿರಬಹುದು! ನಿನಗೆ ದರ್ಶನ ಕೊಡುವ ವಿಭೂತಿಯು ತಾಯಿಯಾಗಿದ್ದರೆ, ನಾನು ನಿಜವೆಂದು ನಂಬುತ್ತಿದ್ದೆನು. ನಮ್ಮ ಸಚ್ಚರಿತ್ರ ಅವ್ವನಿಗೆ ಜನರೆಲ್ಲರು ಕಲಿಯುಗದಲ್ಲಿಯ ಸೀತಾದೇವಿಯೆಂದು ಅನ್ನುತ್ತಿದ್ದರು! ಪರಲೋಕವಾಸಿನಿಯಾದ ಬಳಿಕ, ಆ ಪುಣ್ಯಾತ್ಮಳು ನಿಶ್ಚಯವಾಗಿ ದೇವಪದವನ್ನು ಪಡೆದಿರಬಹುದು. ಆಕೆಯೇ ನಮ್ಮ ದುಃಖವನ್ನು ನೋಡಿ ಸಹಿಸಲಾರದೆ, ಧಾವಿಸುತ್ತಿರಬಹುದೆಂದು ನಾನು ತಿಳಿದಿದ್ದೆನು"

"ಅವ್ವನಂತೂ ಅಲ್ಲೇ ಅಲ್ಲ."

'ಹಾಗಾದರೆ ಯಾರಿರಬಹುದು? ನಿನ್ನ ಪತಿಯಿರಬಹುದೇನು?'

'ಅಲ್ಲ, ಅವರ ಮೂರ್ತಿಯಾದರೂ ಅಲ್ಲವೇ ಅಲ್ಲ! ಅವರಿದ್ದರೆ' ಒತ್ತರಿಸಿ ಬಂದ ದುಃಖವನ್ನು ಒತ್ತುತ್ತ 'ಆಗ್ಗೇ ಗುರ್ತಿಸುತ್ತಿದ್ದೆನು'

"ಅಂದಮೇಲೆ ನಿನ್ನನ್ನು ನದಿಯ ಒಡಲೊಳಗಿಂದ ಯಾರು ತಂದಿರಬಹುದು?"

"ಇದರಲ್ಲಿಯ ರಹಸ್ಯವು ಸ್ವಲ್ಪವೂ ನನಗೆ ತಿಳಿಯದಾಗಿದೆ. ಒಮ್ಮೆಯಲ್ಲ, ಎರಡು ಸಾರೆಯಲ್ಲ; ಪ್ರತಿಯೊಂದು ಸಂಕಟಸಮಯದಲ್ಲಿ ಆ ದೇವಪುರುಷನು ನನಗೆ ದರ್ಶನ ಕೊಡುತ್ತಿರುವನು."

"ಅಂದಮೇಲೆ ನಾನೊಂದು ಯುಕ್ತಿಯನ್ನು ಹೇಳುವೆನು; ಅದರಂತೆ ಮಾಡು. ಶ್ರೀ ಸೀತಾರಾಮನ ಮಂದಿರದಲ್ಲಿ ಧರಣಿಯನು

ಹಿಡಿದು ಕುಳಿತುಕೋ. ಆ ದೇವತೆಯು ತನ್ನ ಪರಿಚಯವನ್ನು ಮಾಡಿ ಕೊಡುವ ವರೆಗೆ ನೀನು ಉಪವಾಸದಿಂದಲೇ ಇರು! ಜಾಗೆಯನ್ನು ಬಿಟ್ಟು ಕದಲಬೇಡ!''

ನಾರಾಯಣ ಕುಮಾರಿಯು ನಗೆಮುಖದಿಂದ ಅನ್ನುತ್ತಾಳೆ: ''ಅಲ್ಲೇ, ನೀನು ನನಗೆ ಇದನ್ನೇನು ಕಲಿಸಲಿಕ್ಕೆ ಬೇಕೇ? ನಾನು ಒಮ್ಮೆ ಹಾಗೆ ಕುಳಿತಿದ್ದೆನು ಸಹ; ಅದರ ಉಪಯೋಗವೇನೂ ಆಗಲಿಲ್ಲ ಏನಾದರೂ ಮಹತ್ಸಂಕಟವು ಪ್ರಾಪ್ತವಾದಾಗ್ಗೆ ಆ ದೇವಪುರುಷನು ದರ್ಶನ ಕೊಡುತ್ತಾನಲ್ಲದೆ, ಅನ್ಯಪ್ರಸಂಗಗಳಲ್ಲಿ ದರ್ಶನ ಕೊಡುವದಿಲ್ಲ ಬೇಕಾದಷ್ಟು ಪ್ರಯತ್ನ ಮಾಡಿದರೂ ಎಲ್ಲವೂ ಹೊಳೆಯಲ್ಲಿ ಹುಣಸೇಹಣ್ಣು ತೊಳೆದಂತೆ ವ್ಯರ್ಥವಾಗುವದು!''

''ಹೀಗಿದ್ದ ಮೇಲೆ ಇದು ನಿಶ್ಚಯವಾಗಿ ನಿನ್ನ ಭ್ರಮೆಯು! ಏನೇ ಆಗಲಿ, ನಾನು ನಿನಗೆ ಸೈನ್ಯವನ್ನು ತೆಗೆದುಕೊಂಡು ವಿಜಯ ಗಂಜದ ಹತ್ತರ ಹೋಗಗೊಡಲಾರೆನು.''

''ನಾನಂತೂ ಹೋಗತಕ್ಕವಳೇ. ನನ್ನ ನಿಶ್ಚಯವು ಪ್ರಾಣಾಂತ್ಯದಲ್ಲಿಯೂ ಬದಲಾಗಲರಿಯದು.''

''ಹಿರಿಯರಿಗೆ ನಿನ್ನ ಈ ಕೃತಿಯು ತಿಳಿದರೆ?''

''ಅವರಿಗೆ ಈ ಸಂಗತಿಯನ್ನು ಹೇಳಲೇಬಾರದು; ಅಂದ ರಾಯಿತು''

''ಒಳ್ಳೇದು; ಅವರಿಗೆ ಈ ಸುದ್ದಿಯನ್ನು ಹೇಳುವದನ್ನು ಬಿಟ್ಟರೂ ಬಿಡಬಹುದು; ಆದರೆ ನೀನು ಶತ್ರುಗಳ ಕೈಯಲ್ಲಿ ಸಿಕ್ಕರೆ, ನಿನ್ನ ಗತಿಯೇನು? ತಂದೆಯ ಗತಿಯೇನು?''

''ಶತ್ರುಗಳಿಂದ ನನ್ನ ಹಿಂದು ಕೂದಲು ಸಹ ಕೊಂಕಿಸಲಾರರು! ನಾನು ಸುಖರೂಪವಾಗಿ ತಿರುಗಿ ಬರುವೆನು ಸ್ವಪ್ನದಲ್ಲಿ ಭೆಟ್ಟಿ ಯಾಗುತ್ತಿರುವ ದೇವತೆಯ ಮೇಲೆ ನನ್ನ ಪೂರ್ಣವಿಶ್ವಾಸವಿರುವದು!''

''ನನಗಂತೂ ಅಕ್ಕಾ, ಬಹಳ ಅಂಜಿಕೆ ಬರುತ್ತದೆ ನೀನು ಹೀಗೆ ಅಗ್ನಿಕುಂಡದಲ್ಲಿ ಹಾರಿಕೊಳ್ಳಬೇಡ!''

'ನೀನು ತಿಲಪ್ರಾಯವೂ ಅಂಜಿಕೆಯನ್ನು ಮನದಲ್ಲಿ ತರಬೇಡ. ಪೃಥ್ವೀವಿಭೂತಿಯ ವಚನವು ಎಂದೂ ಅಸತ್ಯವಾಗಲರಿಯದು!''

''ನಿನ್ನ ಬುದ್ಧಿಯು ಭ್ರಂಶವಾಗಿರುವದೇ ನಿಜವು! ಕನಸಿನಲ್ಲಿ

ಏನೇನೋ ಭಾಸವಾಗುತ್ತಿರಬಹುದು; ಆದಕ್ಕೇ ನೀನು ದೇವತೆ ಯೆಂದು ತಿಳಿಯುತ್ತಿರುವಿ. ಅವ್ವಾ, ನಿನಗೆ ದೇವತೆಯೇ ಭೆಟ್ಟಿ ಯಾಗುತ್ತಿದ್ದರೆ, ಹಾಗು ಆ ದೇವತೆಗೆ ನಮ್ಮ ಕಲ್ಯಾಣದ ಬಗ್ಗೆ ನಿಜ ವಾಗಿಯೇ ಕಳಕಳಿಯಿದ್ದರೆ, ಅದೇ ದೇವತೆಯು ಮಾನಕುಮಾರಿಯ ರಕ್ಷಣೆಯನ್ನು ಯಾಕೆ ಮಾಡಲಿಲ್ಲ?''

''ವೈರಿಗಳ ಮನೆಯಲ್ಲಿ ಮಾನಕುಮಾರಿಯು ನಿರ್ಭಯಳಾಗಿ ರುವಳು!''

''ನಿನಗೆ ಇದೊಂದು ಆಕಾಶದ ಮೇಲಿನ ಗಂಧರ್ವನಗರದಂಥ ಭ್ರಾಂತಿಯಿರುವದು! ತನ್ನ ಮರ್ಯಾದೆಯನ್ನು ಕಾಯ್ದುಕೊಳ್ಳು ವಾಗ-ತನ್ನ ಪಾತಿವ್ರತ್ಯದ ಧರ್ಮವನ್ನು ಉಳಿಸಿಕೊಳ್ಳುವಾಗ-ಮಾನ ಕುಮಾರಿಯು ನಿಶ್ಚಯವಾಗಿ ಆತ್ಮಹತ್ಯೆಯನ್ನು ಮಾಡಿಕೊಂಡಿರ ಬಹುದು!''

''ಮಾನಕುಮಾರಿಯು ಆತ್ಮಹತ್ಯೆಯನ್ನು ಮಾಡಿಕೊಂಡಿಲ್ಲ ಆವಳು ಸುರಕ್ಷಿತವಾಗಿರುವಳು. ತಮ್ಮ ನಾನು ಮಾನಕುಮಾರಿಯ ಶೋಕದಿಂದ ಅತ್ಯಂತ ವ್ಯಾಕುಲಳಾಗಿ ಸೀತಾರಾಮನ ಮಂದಿರದಲ್ಲಿ ನಿರಾಹಾರದಿಂದ ಮಲಗಿದ್ದೆನು. ಸೀತಾಪತಿಯು ನನ್ನ ಮಾನಕುಮಾ ರಿಯನ್ನು ತಿರುಗಿ ಕೊಡದಿದ್ದರೆ-ಮಾನಕುಮಾರಿಯು ಸಿಗದಿದ್ದರೆ.. ಆತನ ಚರಣಗಳ ಮೇಲೆ ಮಸ್ತಕವನ್ನು ಅಪ್ಪಳಿಸಿ, ಪ್ರಾಣತ್ಯಾಗ ಮಾಡಬೇಕೆಂದು ಸಂಕಲ್ಪಿತಳಾಗಿದ್ದೆನು. ಚಂದಾ, ಸತ್ತವರ ದುಃಖ ವನ್ನು ಹಿಂದುಮೇಳೆ ಮರೆಯಬಹುದು ಜೀವದಿಂದಿದ್ದು, ಅಗಲಿದ ಮನುಷ್ಯರ ದುಃಖವನ್ನು ಸಹಿಸುವದು ಮಾತ್ರ ಅಶಕ್ಯವು! ಅಹೋ ರಾತ್ರಿ ಮೂರು ದಿನಗಳ ವರೆಗೆ ನಾನು ಸೀತಾರಾಮನ ಮಂದಿರದಲ್ಲಿ ಉಪವಾಸ ಬಿದ್ದ ಬಳಿಕ, ನಾಲ್ಕನೆಯ ದಿವಸ ಆ ದೈವೀಪುರುಷನು ದರ್ಶನವನ್ನು ಕೊಟ್ಟು, ತುಸ ಕಠೋರ ಸ್ವರದಿಂದ ಅಂದದ್ದೇನಂ ದರೆ:— 'ನೀನು ಹೀಗೆ ಹಟಮಾರಿತನವನ್ನು ಮಾಡಬೇಡ. ನಾರಾ ಯಣಕುಮಾರೀ, ನಿನ್ನ ಮಾನಕುಮಾರಿಯು ನಿರ್ಭಯಳಾಗಿರುವಳು. ಆಕೆಯ ಹಿಂದು ಕೂದಲೆಳೆಯು ಕೂಡ ಕೊಂಕದೆ, ಆಕೆಯು ಹುಲಿ ಯ ಗವಿಯೊಳಗಿಂದಲೂ, ಸಿಂಹನ ಪಂಜರದೊಳಗಿಂದಲೂ, ರಾಕ್ಷ ಸನ ದವಡೆಯೊಳಗಿಂದಲೂ ಪಾರಾಗಿ ಕ್ಷೇಮದಿಂದ ಮನೆಗೆ ಬರು

ವಳು! ಪುಣ್ಯಾತ್ಮಳೂ, ಸತಿ-ಶಿರೋಮಣಿಯೂ ಆದ ಜನಕದುಹಿತಾ ಸೀತಾದೇವಿಯು ತ್ರೇತಾಯುಗದಲ್ಲಿಯ ರಾಕ್ಷಸರನ್ನು ಸಂಹರಿಸ ಲಿಕ್ಕೆ ಜನಿಸಿದಂತೆ, ಅಯೋಧ್ಯೆಯು ಮುಸಲ್ಮಾನರ ಸಂಹಾರಕ್ಕಾಗಿ ಮಾನಕುಮಾರಿಯು ಜನಿಸಿರುವಳು!' ಆದರೆ ಈ ಮಾತಿನಿಂದ ನನ ಗೇನೂ ಸಮಾಧಾನವಾಗಲಿಲ್ಲ. ಆಗ ನಾನು ಆ ವಿಭೂತಿಯ ಚರ ಣಗಳನ್ನು ಗಟ್ಟಿಯಾಗಿ ಹಿಡಿದು, 'ಮಹಾತ್ಮರೇ, ತಾವು ನಿಜವಾ ಗಿಯೂ ಸೀತಾಪತಿಯಿರುವಿರಿ! ನನ್ನ ಮಾನಕುಮಾರಿಯು ಎಲ್ಲಿ ಮತ್ತು ಯಾವ ಸ್ಥಿತಿಯಲ್ಲಿರುವಳೆಂಬುದನ್ನಷ್ಟು ನನಗೆ ದಯಮಾಡಿ ಹೇಳಿರಿ' ಎಂದೆನು. ನನ್ನ ಈ ವಿನಂತಿಯಿಂದ ಆ ದೇವಪುರುಷನು ಹುಬ್ಬುಗಂಟಿಕ್ಕಿ: 'ಇಂದು ಅಯೋಧ್ಯಾನಾಥನು ಇತ್ತ ಬರುವನು. ಅವನು ಅವಳ ಸಂಬಂಧದ ಸವಿಸ್ತರ ವಾರ್ತೆಯನ್ನು ತಿಳಿಸುವನು. ಕಾಶೀನಾಥನೆ ಸಲುವಾಗಿ ಮಾತ್ರ ವ್ಯಗ್ರರಾಗಬೇಡ!' ಎಂದು ಹೇಳಿ, ತತ್‌ಕ್ಷಣವೇ ಅಂತರ್ಧಾನನಾದನು. ಚಂದಾ, ಆಶ್ಚರ್ಯವನ್ನೇನು ಹೇಳಲಿ? ಅದೇ ದಿವಸ ಅಯೋಧ್ಯಾನಾಥನು ತಿರುಗಿ ಬಂದನು. ಮಾನಕುಮಾರಿಯು ಠಕ್ಕ-ದರವಡೆಖೋರರ ಕೈಯಲ್ಲಿ ಸಿಕ್ಕಿಂದು, ರಾಜಾ ದರ್ಶನಸಿಂಹನ ಜನರು ಪಂಜಾಬಕ್ಕೆ ಕರಕೊಂಡು ಹೋದ ರೆಂದು ಹೇಳಿದನು."

ಲಗುಬಗೆಯಿಂದ ಚಾಂದಕುಮಾರಿಯು ನಡುವೇ ಬಾಯಿ ಹಾಕಿ ಅಂದದ್ದು: "ನಬಾಬನ ಜನರೇ ಮಾನಕುಮಾರಿಯನ್ನು ಹಿಯ್ದಿರಲಿಕ್ಕಬೇಕೆಂದು ನನಗೆ ಮೊದಲಿನಿಂದಲೇ ಅನಿಸುತ್ತಿತ್ತು. ದರವಡೆಖೋರರಿಗೆ ವಸ್ತ್ರ-ಹಡವೆಗಳನ್ನೂ, ಮುತ್ತು-ರತ್ನಗಳನ್ನೂ ಬಿಟ್ಟು ಅವಳನ್ನು ಹಿಯ್ಯುವದರಿಂದ ಆಗುವ ಲಭ್ಯಾಂಶವೇನು? ಇರಲಿ. ಅಣ್ಣನು ಇನ್ನೂ ಜೀವಂತನಿರುವನೆಂದು ನಿನಗನಿಸುವದೊ?"

"ಅಣ್ಣನು ಆತ್ಮಹತ್ಯೆಯನ್ನು ಮಾಡಿಕೊಂಡಿರಲಿಕ್ಕಿಲ್ಲ. ಯಾವ ದೇವಪುರುಷನು ನನ್ನನ್ನು ನದಿಯ ಹಡಲೊಳಗಿಂದ ಉಳಿಸಿದನೋ ಅದೇ ಮಹಾತ್ಮನು ಅಣ್ಣನನ್ನೂ ರಕ್ಷಿಸಿರಬಹುದೆಂದು ನನಗೆ ತೋ ರುತ್ತದೆ."

"ಅಂದಮೇಲೆ ಅಪ್ಪನಿಗೆ ಈ ಸಂಗತಿಯನ್ನು ನೀನು ಇಂದಿನ ವರೆಗೂ ಯಾಕೆ ಹೇಳಲಿಲ್ಲ?"

"ಇವೆಲ್ಲ ಅತ್ಯಾಶ್ಚರ್ಯಕಾರಕ ಸಂಗತಿಗಳ ಮರ್ಮವು ನನಗೇ ತಿಳಿಯದಿರಲು, ಅಪ್ಪನಿಗೆ ಹೇಗೆ ಹೇಳಲಿ?"

"ಅಯೋಧ್ಯಾನಾಥನ ಕಿವಿಯ ಮೇಲೆ ಈ ಸಂಗತಿಯನ್ನು ಇಡಬೇಕು ಅವನಿಗೆ ಎಲ್ಲ ಶಾಸ್ತ್ರಗಳೂ ಅವಗತವಿರುವವು ಅವನಿಗೆ ಇವುಗಳ ಗೌಪ್ಯಮರ್ಮವು ಹೊಳೆಯಬಹುದು"

"ಸಾವಕಾಶ ಮಾತಾಡು, ಹಿರಿಯರು ಎಚ್ಚರಾದರೆಂಬಂತೆ ತೋರುತ್ತದೆ" ಎಂದು ಮೆಲ್ಲಗೆ ನುಡಿದಳು.

ಚಾಂದಕುಮಾರಿಯ ಮುಖದಿಂದ 'ಅಯೋಧ್ಯಾನಾಥ' ಎಂಬ ಶಬ್ದವು ಹೊರ ಹೊರಡುವಷ್ಟರಲ್ಲಿ ಪಲ್ಲಂಗದ ಮೇಲೆ ಪವಡಿಸಿದ ವೃದ್ಧನು—ಗಂಗಾಪ್ರಸಾದನು ಎಚ್ಚತ್ತನು ಅಳಿಯನ ಹೆಸರನ್ನು ಕೇಳಿದ ಆತನು: "ಅಯೋಧ್ಯಾನಾಥನು ಬಂದನೋ? ಏನು ಸುದ್ದಿಯನ್ನು ತಂದಿರುವನು?" ಎಂದು ಕೇಳಿದನು

ಗಂಗಾಪ್ರಸಾದನ ಮುಖದಿಂದ ಈ ಮಾತುಗಳನ್ನು ಕೇಳಿದ ಕೂಡಲೆ, ನಾರಾಯಣ ಕುಮಾರಿಯು ಪಲ್ಲಂಗದ ಹತ್ತರ ಹೋಗಿ ಕುಳಿತು: "ಇಲ್ಲ, ಅಯೋಧ್ಯಾನಾಥನು ಇನ್ನೂ ಬಂದಿಲ್ಲ" ಎಂದು ಮೆಲ್ಲಗೆ ನುಡಿದಳು.

ಇದನ್ನು ಕೇಳಿದ ಕೂಡಲೆ ಗಂಗಾಪ್ರಸಾದನು ಖಿನ್ನ ಮನಸ್ಕನಾಗಿ ಹಿಂದು ನಿಟ್ಟುಸಿರು ಬಿಟ್ಟನು!

---

## ನಾರಾಯಣಕುಮಾರಿಯ ವೀರಶ್ರೀ.

ಮಾಘಮಾಸವು, ಬೆಳಗಾಗುತ್ತ ಬಂದಿದೆ. ಶೈಶಿರ ಋತುವಿನ ಅತ್ಯಂತ ಚಳಿಯ ಸಾಮ್ರಾಜ್ಯವು ಪಸರಿಸಿದೆ ಆ ಅತಿಶಯ ಚಳಿಯು ಅಯೋಧ್ಯಾಪ್ರಾಂತದಲ್ಲಿಯ ಕಲ್ಲು-ಗುಂಡುಗಳನ್ನೂ, ಗಿಡಗಂಟಿಗಳನ್ನೂ ಗದಗುಟ್ಟ ನಡುಗಿಸುತ್ತಿರಲು, ಮನುಷ್ಯರ ಪಾಡೇನು? ಆಕಾಶದಲ್ಲಿಯ ಮೋಡವು ಥಂಡಿಯ ಸೆಳವಿಗೆ ಬೆದರಿ, ಭೂತಳಕ್ಕೆ ಇಳಿಯಿತೆಂಬಂತೆ ಸುತ್ತುಮುತ್ತೆಲ್ಲ ಬೆಳ್ಳನ್ನ ಮಂಜು ಮುಸುಕಿದೆ ಸಮೀಪದಲ್ಲಿದ್ದರೂ ಹಿಬ್ಬರ ಮೋರೆಯು ಮತ್ತೊಬ್ಬರಿಗೆ ಕಾಣದಾ

ಗಿದೆ. ಎಡಬಲದ ಹುಲ್ಲುಗರಿಗಳ ಮೇಲೆಯೂ, ಗಿಡ-ಗಂಟೆಗಳ ತೊಪ್ಪಲಗಳ ಮೇಲೆಯೂ ಬಿದ್ದಿದ್ದ ಇಬ್ಬನಿಯ ಹನಿಗಳು ಶೀತಬಾಧೆಯಿಂದ ಅಲ್ಲಿಂದಲ್ಲಿಯೇ ಹೆಪ್ಪುಗಟ್ಟಿ ಹಸುರುವರ್ಣದ ರತ್ನಗಂಬಳಿಗೆ ಶುಭ್ರ ಮುತ್ತು ಕೆಚ್ಚಿದಂತೆ ನಯನಾಹ್ಲಾದಕರವಾಗಿ ತೋರುತ್ತಿವೆ ಶೀತಬಾಧೆಗಂಜಿದ ವಾಯುವು ಎತ್ತೋ ಅಡಗಿಬಿಟ್ಟಿದ್ದನು. ಏಳುವ ಹೊತ್ತಾಗಿದ್ದರೂ ಸಹ ಶೈಶಿರದ ಚಳಿಗೂ, ಅದನ್ನು ಹೆಚ್ಚಿಸುವದಕ್ಕೋಸ್ಕರ ಬಿದ್ದಿದ್ದ ಮಂಜು-ಇಬ್ಬನಿಗಳಿಗೂ ಅಂಜಿಕಟ-ಕಟನೆ ನಡುಗಿ ಹಾಸಿಗೆಯನ್ನು ಬಿಟ್ಟು ಏಳಲಾರದ ವಿಜಯಗಂಜದಲ್ಲಿಯ ವರ್ತಕರಲ್ಲಿಯ ಹಲ-ಕೆಲವರು ಗಡದ್ದಾದ ಕಂಬಳಿಯನ್ನು ಹೊದ್ದುಕೊಂಡು ಹಾಸಿಗೆಯ ಮೇಲೆಯೇ ಕುಳಿತುಕೊಂಡಿದ್ದರು. ಕೆಲವರು ತಮ್ಮ ನಿತ್ಯನೈಮಿತ್ತಿಕ ಕ್ರಮಕ್ಕನುಸರಿಸಿ, ತಮ್ಮ ಪ್ರಿಯ ಚಿಲಿಮೆಯನ್ನು ಆಸ್ಥೆಯಿಂದ ಸ್ವೀಕರಿಸಿ, ಮೇಲೆ ಅಗ್ನಿಯನ್ನು ಆರೋಹಣ ಮಾಡಿಸಿ ಝುರಿಕೆಯ ಮೇಲೆ ಝುರಿಕೆಯನ್ನು ಸೇದುತ್ತಲೂ, ನಡ-ನಡುವೆ ಖಾಕ್ ಖಾಕ್, ಖಾಕ್ ಎಂದು ಕೆಮ್ಮುತ್ತಲೂ ಕುಳಿತಿದ್ದರು ಅಳಸಿಂಗರಾಯನಂಥ ಹಲ-ಕೆಲವರು ಚಳಿಯ ಬಾಧೆಯನ್ನು ಸಹಿಸಲಾರದೆ ಗುಡಗುಡಿಯನ್ನು ಹೊತ್ತಿಸಿಕೊಡೆಂದು, ಗೊಡಗಾಲಹಚ್ಚಿ ಬಿದ್ದಿರುವ ತಮ್ಮ ಸೇವಕರಿಗೆ ಹಾಸಿಗೆಯ ಮೇಲೆ ಬಿದ್ದುಕೊಂಡೇ ಹುಕುಮು ಮಾಡುತ್ತಿದ್ದರು; ಮತ್ತೆ ಕೆಲವು ರಾಜಶ್ರೀಗಳು ಹಾಸಿಗೆಯ ಮೇಲೆ ಆಕಳಿಸುತ್ತ ಹೊರಳಾಡುತ್ತಲೇ, ತೀವ್ರ ಎದ್ದು ಅಂಗಡಿಯ ಬಾಗಿಲವನ್ನು ತೆಗೆದು ಕಸ-ಗಿಸ ಉಡುಗಿರೆಂದು ಆ ಥಂಡಿಯಿಂದ ಕಟ-ಕಟ ನಡುಗುತ್ತಿದ್ದ ಸೇವಕರಿಗೆ ಆಜ್ಞಾಪಿಸುತ್ತಿದ್ದರೂ, ಅವರು ಏಳದ್ದನ್ನು ನೋಡಿ, ಹಾಸಿಗೆಯ ಮೇಲಿಂದಲೇ ಬೈಗಳ ವೃಷ್ಟಿಯನ್ನು ಸುರಿಸತೊಡಗಿದ್ದರು ಅವರಲ್ಲಿಯೇ ಕೆಲವು ಸಾಹಸಿಗಳು 'ಇಂಥ ವಯಸ್ಸಿನಲ್ಲಿ ಹೀಗೆ ಥಂಡಿಯೆಂದರೆ ಹೇಗೆ?' ಎಂದೆನ್ನುತ್ತ ತಮ್ಮ ಪ್ರಾತರ್ವಿಧಿಗಳನ್ನು ತೀರಿಸಿಕೊಂಡು, ಹಾ-ಹಾ ಹೂ-ಹೂ ಎನ್ನುತ್ತ ನಡಗುವ ಕೈಗಳಿಂದ ಅಂಗಡಿಯ ಫಡಕುಗಳನ್ನು ತೆಗೆಯಹತ್ತಿದ್ದರು. ಅಷ್ಟರಲ್ಲಿ ಭಗವಾನ್ ಸೂರ್ಯನಾರಾಯಣನು ಉದಯವಾದನು; ಆದರೂ ಮಂಜು ಬಹು ದಟ್ಟವಾಗಿ ಬಿದ್ದದರಿಂದ, ಆತನು ಪ್ರತ್ಯಕ್ಷವಾಗಿ ಗೋಚರಿಸದೆ, ಪೂರ್ವದಿಕ್ಕಿಗೆ ಏನೋ ತುಸ ಕೆಂಪು ಪ್ರಕಾ

ಶವು ಹಿಡಿದಿರಬಹುದೆಂಬಂತೆ ತೋರುತ್ತಿದೆ. ಬರಬರುತ್ತ ದಿನಕರನು ದೃಗ್ಗೋಚರನಾದರೂ, ಆತನೂ-ಆ ತೇಜಃಪುಂಜ ಭಾಸ್ಕರನೂ-ಸಹ ಮಹೀತಳದ ಶೀತ ಬಾಧೆಗೆ ಹೆಚ್ಚಾಗಿ ಅಂಜಿ, ಹಿಮಕಣದ ವೇಷವನ್ನು ತಾಳಿರುವನೋ, ಏನೋ ಎಂಬಂತೆ ಭಾಸವಾಗುತ್ತಿದೆ ಕಡು ವೈರಿಯಾದ ಚಳಿಯು ಮಹೀತಳದ ಮೇಲೆ ತನ್ನ ಸಾಮ್ರಾಜ್ಯವನ್ನು ನಿಃಶಂಕೆಯಿಂದ ಪಸರಿಸಿರುವದನ್ನು ನೋಡಿ, ಕಡು ಕೋಪಗೊಂಡು ಕೆಂಪಡರಿದ ಮುಖ-ನೇತ್ರಗಳುಳ್ಳ ದಿನಮಣಿಯು, ಬರಬರುತ್ತ ಹೆಚ್ಚೆಚ್ಚು ಪ್ರಖರನಾಗುತ್ತಲೂ, ಉತ್ತರದಿಂದ ತನ್ನ ರಥವನ್ನು ದೂಡುತ್ತಲೂ ನಭೋಮಂಡಲವನ್ನು ಏರತೊಡಗಿದನು. ಆಗ ಆ ಭಾಸ್ಕರನು ಚಳಿಯನ್ನು ಓಡಿಸಿಯೇ ಬಿಡಬೇಕೆಂದು ಕೃತನಿಶ್ಚಯವನ್ನು ಮಾಡಿದಂತೆ ತೋರಿತು; ಆದರೆ ಹಿಮವಾದರೂ ಕಡಿಮೆಯು ತರಗತಿಯುದಿದ್ದಿಲ್ಲ. ಪ್ರತಿದಿನ ಮೆರೆದಾಡುವ ಈ ರವಿಗೆ ಆದಷ್ಟು ಕೈ ತೋರಿಸಿಯೇ ಬಿಡಬೇಕೆಂದು ಮಾಡಿತು. ತಾಸೆರಡು ತಾಸುಗಳ ವರೆಗೆ ಪರಸ್ಪರರ ಏರಾಟವು ನಡೆದ ಬಳಿಕ, ಸಹಸ್ರಕಿರಣನ ಉಗ್ರಬಾಣಗಳ ಪೆಟ್ಟನ್ನು ಸಹಿಸಲಾರದೆ, ಹಿಮದಳವು ಚದರಲಾರಂಭಿಸಿತು. ಮಂಜು-ಇಬ್ಬನಿಗಳ ಕಸುವು ಕುಗ್ಗಿತು. ಈ ಸಂಧಿಯನ್ನು ಸಾಧಿಸಿ, ರವಿಯು ಮತ್ತಷ್ಟು ಕೂರಂಬುಗಳನ್ನು ಎಸೆಯತೊಡಗಲು, ಸ್ವಲ್ಪಾವಧಿಯಲ್ಲಿಯೇ ಚಳಿಯು-ಚಳಿಯ ಸಾಮ್ರಾಜ್ಯವು-ನಾಶವಾಗುವ ಸಮಯವು ಬಂದೊದಗಿತು

ಹಾ-ಹಾ ಅನ್ನುವಷ್ಟರಲ್ಲಿ ತಾಸೆರಡು ತಾಸು ಹೊತ್ತು ಏರಿತು; ಆದರೂ ಶೀತಬಾಧೆಯು ಕೆಲವಂಶದಿಂದ ಇದ್ದೇ ಇತ್ತು. ಪೇಟೆಯಲ್ಲಿಯ ಎಲ್ಲ ಅಂಗಡಿಗಳು ತೆರೆಯಲ್ಪಟ್ಟು, ಕೊಡ-ಕೊಳ್ಳುವ ವ್ಯವಹಾರವು ಎಂದಿನಂತೆ ನಡೆಯಿತು. ಶೆಟ್ಟಿ-ಸಾವುಕಾರರು ಲೋಡು-ತೆಕ್ಕೆಗಳಿಗೆ ಆತುಕೊಂಡು ಕುಳಿತಿದ್ದು, ಕೈಕೆಳಗಿನ ಸೇವಕರಿಂದ ವ್ಯವಹಾರವನ್ನು ಸಾಗಿಸಿದ್ದಾರೆ. ದಿನದಂತೆ ಜನರ ಓಡಾಟವೂ, ಕೂಗಾಟವೂ ನಡೆದಿದೆ; ಆದರೆ ಇಂದಿನ ದಿವಸವು ತಮ್ಮ ಕ್ರಯ-ವಿಕ್ರಯದ ಕೊನೆಯ ದಿವಸವೆಂಬದೂ, ಸಂಜೆಯಾಗುವದರೊಳಗೆ ವಿಜಯಗಂಜವು ನಾಮಶೇಷವಾಗುವದೆಂಬದೂ, ತಾವು ಭಯಂಕರ ರೀತಿಯಿಂದ ಹಾಲಾಹಲವನ್ನು ಅನುಭೋಗಿಸಬೇಕಾಗುತ್ತದೆಂಬದೂ

ಪಾಪ! ಆ ಕರ್ತವ್ಯದಕ್ಷರಾದ ಅಂಗಡಿಕಾರರ ಕನಸು-ಮನಸುಗಳ ಲ್ಲಿಯೂ ಬಂದಿದ್ದಿಲ್ಲ!!

ಮಧ್ಯಾಹ್ನದ ಸಮಯವಾಯಿತು. ಅಲ್ಲಿಯ ವ್ಯಾಪಾರಸ್ಥ ರಲ್ಲಿ ಕೆಲವರು ಸ್ನಾನಮಾಡತೊಡಗಿದ್ದಾರೆ; ಕೆಲವರು ಅಂಗಡಿಗಳ ನ್ನಿಕ್ಕಿ ಮನೆಗೆ ಹೋಗತೊಡಗಿದ್ದಾರೆ; ಕೆಲವರು ಊಟಕ್ಕೆ ಕುಂತಿ ದ್ದಾರೆ; ಕೆಲವು ದೊಡ್ಡ ಹೊಟ್ಟೆಯ ಶೆಟ್ಟರು ಮೊದಲೇ ಊಟ ಮಾಡಿ, ತಾಂಬೂಲವನ್ನು ಸವಿಯುತ್ತ ಲೋಡು-ಗಿರದೆಗಳಿಗೆ ನಂಬಿ ದ್ದಾರೆ; ಸೇವಕ ಜನರು ಅಂಗಡಿಯ ಕೆಲಸವನ್ನು ಮುಗಿಸಿ ಲಗಬಗೆ ಯಿಂದ ಅಡಿಗೆಯನ್ನು ಮಾಡಿಕೊಳ್ಳಲಾರಂಭಿಸಿದ್ದಾರೆ; ಸಾರಾಂಶ, ಸರ್ವರೂ ಬಹುಶಃ ತಮ್ಮ ಮಧ್ಯಾಹ್ನದ ಊಟದ ಗೊಂದಲದಲ್ಲಿ ತೊಡಗಿದ್ದಾರೆ ಅಷ್ಟರಲ್ಲಿ ದೂರದಲ್ಲಿ ಪಶ್ಚಿಮದ ಕಡೆಗೆ ಯಾವದೋ ಒಂದು ಜನರ ಗುಂಪು ಬರುತ್ತಿರುವಂತೆ ಅವರಿಗೆ ಭಾಸವಾಯಿತು. ಮುಂದೆ ಸ್ವಲ್ಪ ಹೊತ್ತಿನಲ್ಲಿ ಆ ಸಮೂಹವು ವಿಜಯಗಂಜದ ಕಡೆಗೇ ಬರಹತ್ತಿತು. ಆ ಜನರ ಮುಂದಿರುವ ಸರಾಸರಿ ಐವತ್ತು ಜನ ಕುದುರೆಯ ಸವಾರರು ತಮ್ಮ ಕುದುರೆಗಳನ್ನು ಒತ್ತರದಿಂದ ನೂಕುತ್ತ ವಿಜಯಗಂಜದ ಕಡೆಗೇ ಬರುತ್ತಿದ್ದರು. ಹಾ! ಹಾ! ಅನ್ನುವಷ್ಟರಲ್ಲಿ ಅವರು ಪೇಟೆಯಲ್ಲಿ ಬಂದುಬಿಟ್ಟರು. ಆ ಲಷ್ಕರೀ ಸಿಸ್ತಿನ ಗುಂಪನ್ನು ನೋಡಿದ ಕೂಡಲೆ, ಎಲ್ಲ ವ್ಯಾಪಾರಿಗಳು ಗರ್ಭ ಗಲಿತರಾದರು! ಆದರೂ ಆ ಸ್ವಾರರಲ್ಲಿ ಎಲ್ಲರ ಮುಂದೆ ಸೀತಾಪುರ ಕಿಲ್ಲೆಯಲ್ಲಿಯ ಮುಖ್ಯಾಧಿಕಾರಿಗಳಾದ ಗಯಾಪ್ರಸಾದನೂ, ಠಾಕುರ ಪ್ರಸಾದನೂ ಮತ್ತು ಕಲ್ಯಾಣ ಸಿಂಹನೂ ಇರುವದನ್ನು ನೋಡಿ ಅಂಗಡಿಕಾರರ ಜೀವದಲ್ಲಿ ಜೀವ ಬಂದಂತಾಯಿತು. ಸದ್ಯಕ್ಕಾ ದರೂ ಅಂಥ ಕಠಿಣ ಪ್ರಸಂಗವಿಲ್ಲೆಂದು ಅವರು ಮನದಲ್ಲಿ ಕುಸ ಧೈರ್ಯವನ್ನು ತಂದುಕೊಂಡರು; ಆದರೆ ಅವರ ಈ ಧೈರ್ಯವು ಕಡೆಯನಕ ಮಾತ್ರ ಉಳಿಯಲಿಲ್ಲ. ಪೇಟೆಯಲ್ಲಿ ಬಂದ ಕೂಡಲೆ ಮೇಲಿನ ನಾಯಕರು ಭಯಭೀತ ಮುದ್ರೆಯಿಂದ ಜನರಿಗೆ ಹೇಳಲಾ ರಂಭಿಸಿದರು:- "ವ್ಯಾಪಾರಿಗಳೇ, ಓಡಿರಿ! ಓಡಿರಿ!! ನಿಮ್ಮ ಮೇಲೆ ಕಠಿಣ ಪ್ರಸಂಗವು ಬಂದಿರುವದು ಬಾದಶಹನ ತಾಲೂಕದಾರರೂ, ತಹಶೀಲದಾರರೂ ನಿಮ್ಮ ಈ ಪೇಟೆಯನ್ನು ಲೂಟಮಾಡುವದಕ್ಕೋ

ಸ್ಕರ ಇಂಗ್ಲಿಷರ ದಂಡಿನೊಡನೆ ಬರುತ್ತಿರುವರು! ನೀವೆಲ್ಲರು ನಿಮ್ಮ ನಿಮ್ಮ ವಸ್ತು-ಒಡವೆಗಳನ್ನು ತೆಗೆದುಕೊಂಡು, ಆದಷ್ಟು ತೀವ್ರ ಓಡಿ ಹೋಗಿರಿ, ತಡ ಮಾಡಬೇಡಿರಿ!!" ವಾಚಕರೇ, ಮೇಲಿನ ಈ ಕರ್ಣ ಕಠೋರವಾದ ಭಯಂಕರ ಶಬ್ದಗಳು ಕಿವಿಗೆ ಬಿದ್ದ ಕೂಡಲೆ ಆದ ವ್ಯಾಪಾರಿಗಳ ಕರುಣಾಜನಕ ಸ್ಥಿತಿಯ ಕಲ್ಪನೆಯನ್ನು ಮಾಡುವದು ಕಷ್ಟ! ಇಡಿ ಜನ್ಮದಲ್ಲಿ ಕಷ್ಟ ಸೋಸಿ ಗಳಿಸಿದ ಸಂಪತ್ತು, ಸಣ್ಣ-ದೊಡ್ಡ ಪದಾರ್ಥಗಳ ರೂಪದಿಂದ ಅಂಗಡಿಯಲ್ಲಿ ತೊಡಗಿದೆ. ಅದೆಲ್ಲ ವನ್ನು ತೆಗೆದುಕೊಂಡು ಓಡಿ ಹೋಗುವ ಬಗೆಯಾದರೂ ಹೇಗೆ? ಆದರೂ ನಿರುಪಾಯಾಸ್ಪವಾಗಿ ತಮ್ಮ ಕೈಯಿಂದ ಹೊರಲಿಕ್ಕಾಗು ವಷ್ಟು ಒಜ್ಜೆಯನ್ನು, ಅದರಲ್ಲಿಯೂ ಬೆಲೆಯುಳ್ಳ ಒಡವೆಗಳನ್ನು ಒಡ ಬಡ ಗಂಟುಕಟ್ಟಿ, ತಲೆಯ ಮೇಲೆಯೂ ಬೆನ್ನ ಮೇಲೆಯೂ ಹೊತ್ತುಕೊಂಡು ದಾರಿ ಸಿಕ್ಕತ್ತ ಓಡತೊಡಗಿದರು! ಜನರ ಭಯಂ ಕರ ಕೋಲಾಹಲದಿಂದಲೂ, ಓದರಾಟದಿಂದಲೂ ಗಜಬಜಿಸುತ್ತಿದ್ದ ವಿಜಯುಗಂಜಪೇಟೆಯು ಹಿಂದೆರಡು ತಾಸುಗಳ ಒಳಗಾಗಿಯೇ ಭಯಂಕರ ಸ್ಮಶಾನದಂತೆ ಜನಶೂನ್ಯವಾಯಿತು!!

ಮೇಲಿನ ಅಚ್ಚುಕಟ್ಟಿನ ಪುಟ್ಟ ಸೈನ್ಯವು ಸೀತಾಪುರದಿಂದ ಬಂದಿತ್ತು. ಸೈನ್ಯದ ಪಶ್ಚಿಮಭಾಗದಲ್ಲಿ ನಾರಾಯಣಕುಮಾರಿಯ ಭವ್ಯವಾದ ಆನೆಯು ಶೋಭಿಸುತ್ತಿತ್ತು. ಇಂಗ್ರಜರ ಸಂಗಡ ಯುದ್ಧ ಮಾಡುವದಕ್ಕೆಂದು ಸ್ವತಃ ನಾರಾಯಣಕುಮಾರಿಯು ಸೇನಾಧ್ಯಕ್ಷಳಾಗಿ ರಣಭೂಮಿಗೆ ಬಂದಿದ್ದಳು. ನಾರಾಯಣಕುಮಾ ರಿಯ ಆಗಿನ ವೀರವೇಷವು ಪ್ರೇಕ್ಷಣೀಯುವಿತ್ತು. ರೇಶಿಮೆಯ ಶ್ವೇತವಸ್ತ್ರವನ್ನುಟ್ಟು, ಅವಳು ವೀರಗಚ್ಚೆಯನ್ನು ಹಾಕಿದ್ದಳು. ಬಿಗಿಯಾದ ಹಸುರು ಕುಪ್ಪಸವನ್ನು ತೊಟ್ಟಿದ್ದಳು ಅಡ್ಡಸೆರಗನ್ನು ಗಟ್ಟಿಯಾಗಿ ಕಟ್ಟಿಕೊಂಡು ನಡಕ್ಕೆ ಒಂದು ಪಟ್ಟಿಯನ್ನು ಬಿಗಿದಿ ದ್ದಳು. ಚಿಲಖತ್ತನ್ನು ಧರಿಸಿದ್ದು, ಮೇಲೆ ಒಂದು ಭವ್ಯವಾದ ಗುಲಾಬಿವರ್ಣದ ಕವಣಿಯನ್ನು ಸರ್ವಾಂಗವು ಮುಚ್ಚುವಂತೆ ಧರಿಸಿ ದ್ದಳು. ಅವಳ ಟೊಂಕದಲ್ಲಿ ಒಂದು ಸೂಕ್ಷ್ಮವಾದ ಕತ್ತಿಯು ಆಲೆದಾಡುತ್ತಿತ್ತು. ಅಂಬಾರಿಯ ಒಲಬದಿಯಲ್ಲಿ ಇದ್ದ ಉದ್ದನ್ನ ತೀಕ್ಷ್ಣ ಭಾಲೆಯು ವೈರಿಗಳ ಎದೆಯನ್ನು ಶೀಳುತ್ತೇನೆಂದು ಹೆಮ್ಮೆ

ಪಡುತ್ತಿತ್ತು. ಆ ವೀರ ವನಿತೆಯ ಮುಖವು ಇಂದಿನ ದಿವಸ ವೀರ ಪುರುಷನನ್ನೂ ಹಿಮ್ಮೆಟ್ಟಿಸುತ್ತಿತ್ತು! ಧನುಷ್ಯಾಕಾರದ ಅವಳ ಕಪ್ಪನ್ನ ಹುಬ್ಬುಗಳು ಇಂದು ನಿಜವಾಗಿಯೇ ವೈರಿಗಳ ಹೃದಯ ವನ್ನು ಸೀಳುವದಕ್ಕೆಂದು ಮೇಲಕ್ಕೇರಿ ಸಜ್ಜಾಗಿ ನಿಂತಿದ್ದವು; ಅರಳಿದ ನೈದಿಲೆಯಂತಿನ್ನ ವಿಸ್ತಾರವಾದ ಕಣ್ಣುಗಳಲ್ಲಿಯ ಓರೆ ನೋಟವು ಮಾಯವಾಗಿದ್ದು, ವೀರಾಗ್ರಣಿಯ ಕಣ್ಣುಗಳಂತೆ ಭೀಕರವಾಗಿದ್ದವು; ಕಪೋಲಗಳಲ್ಲಿಯ ಗುಲಾಬಿಯ ಛಾಯೆಯು ಅಡಗಿದ್ದು, ಆರಕ್ತ ವರ್ಣವು ಮಿನುಗುತ್ತಿತ್ತು ಸಿಟ್ಟಿಗೆದ್ದ ಸರ್ಪದಂತೆ ಶ್ವಾಸೋ ಚ್ಛ್ವಾಸವು ಹೆಚ್ಚರದಿಂದ ಸಾಗಿತ್ತು; ತುಟಿಗಳು ಘುಃಘುಂಸು ತ್ತಿದ್ದು, ಆಗಾಗ್ಗೆ ದಾಡಿವ ಬೀಜದೋಪಾದಿಯಲ್ಲಿರುವ ಶುಭ್ರದಂತ ಪಂಕ್ತಿಯಿಂದ ಅವಡುಗಚ್ಚಲ್ಪಡುತ್ತಿದ್ದವು ಹೃದಯಪ್ರದೇಶವು ಉನ್ನತ ಸ್ತನ್ಯಭಾಗದಿಂದ ಸ್ವಾಭಾವಿಕವಾಗಿ ಒಡೆದು ಕಾಣು ತ್ತಿದ್ದು, ಕಟಿಪ್ರದೇಶವು ನಡುಪಟ್ಟಿಯನ್ನು ಗಟ್ಟಿಯಾಗಿ ಕಟ್ಟಿ ದ್ದರಿಂದ ಆಕುಂಚಿತವಾಗಿ ತೋರುತ್ತಿತ್ತು. ಆಗಿನ ವೀರವೇಷ ವನ್ನು ನೋಡಿದರೆ, ಇವಳೇನು ಅಸುರ ವಧಾರ್ಥವಾಗಿ ಸಂಗ್ರಾ ಮಕ್ಕೆ ಬಂದಿದ್ದ ಭಗವತಿ ಹೇಮವತಿಯೋ, ದಾನವರ ಉಪಸಂ ಹಾರಾರ್ಥವಾಗಿ ಸ್ವತಃ ಸಜ್ಜಾದ ಆದಿಶಕ್ತಿಯೋ, ದುಷ್ಕರ ಸಂಹಾ ರಕ್ಕಾಗಿ ವಿರವೇಷವನ್ನು ತಾಳಿದ ಮಹಾ ಕಾಲಿಯೋ ಅಥವಾ ತನ್ನ ಮೇಲಿನ ಅಸಹ್ಯ ಭಾರವನ್ನು ತಾಳಲಾರದೆ ಸ್ವತಃ ತಾನೇ ದುಷ್ಟ ರನ್ನು ಶಿಕ್ಷಿಸುವದಕ್ಕೆಂದು ವೀರವನಿತೆಯ ವೇಷವನ್ನು ಧರಿಸಿದ ಭೂ- ಮಾತೆಯೋ ಏನೋ ಎಂಬಂತೆ ಭಾಸವಾಗುತ್ತಿತ್ತು! ರಾಣಿಯು ಸೈನಿಕರನ್ನು ಪ್ರೋತ್ಸಾಹಿಸುತ್ತಲೂ, ನಡನಡುವೆ ಗಯಾಪ್ರಸಾದ- ಕಲ್ಯಾಣಸಿಂಹರಿಗೆ ಯೋಗ್ಯ ಅಪ್ಪಣೆಯನ್ನೀಯುತ್ತಲೂ ಅತ್ತಿತ್ತ ಅಡ್ಡಾಡುತ್ತಿದ್ದಳು ಕೊನೆಗೆ ವಿಜಯಗಂಜದ ಪೂರ್ವದಿಕ್ಕಿಗೆ ಸವಾರು ಒಂದು ಹರದಾರಿಯ ಮೇಲೆ ಸಜ್ಜಾಗಿ ನಿಂತು, ಶತ್ರುಗ ಳಿಗೆ ಎದುರಾಗಬೇಕೆಂದು ತನ್ನ ಸೈನಿಕರಿಗೆ ಆಜ್ಞೆ ಮಾಡಿದಳು.

ದಿನಕರನು ಮುಂಜಾವಿನಿಂದ ಹಾದಿಯನ್ನು ನಡೆನಡೆದು ಬೇಸತ್ತವನಂತೆ, ಬರಬರುತ್ತ ಆರಕ್ತಮುಖವನ್ನು ಮಾಡಿಕೊಂಡು, ಅಸ್ತಾಚಲವನ್ನಾಶ್ರಯಿಸಲಿಕ್ಕೆಂದು ಹೆಚ್ಚರದಿಂದ ಸಾಗಹತ್ತಿದನು.

ಪಶ್ಚಿಮದಿಕ್ಕೆಂಬ ವನಿತೆಯು ಕೆಂಪುವಸ್ತ್ರವನ್ನು ಪರಿಧಾನಿಸಿ, ದಿನಕರನ ಸ್ವಾಗತಕ್ಕೆಂದು ಸಜ್ಜಾಗಿದ್ದಾಳೆ. ಪಶ್ಚಿಮಾದ್ರಿಯನ್ನಾರೋಹಿಸಿದ್ದ ದಿನಮಣಿಯು ಇಷ್ಟೊತ್ತಿನ ವರೆಗೆ ತಾಪ ಕೊಟ್ಟದ್ದ ಭೂಲೋಕದ ಜನರ ಕಡೆಗೆ ಕೃಪಾದೃಷ್ಟಿಯಿಂದ ನೋಡುತ್ತ, ಹೊಂಬಣ್ಣದ ಸೂಕ್ಷ್ಮ ಕಿರಣಗಳನ್ನು ಭೂಮಾತೆಯ ಮೇಲೆ ಹರಡಿದ್ದಾನೆ. ಪಕ್ಷಿಗಣವು ತಮ್ಮ ವ್ಯವಹಾರವನ್ನು ಬಿಟ್ಟುಕೊಟ್ಟು, ಕಿಲಿ-ಬಿಲಿ ಶಬ್ದಮಾಡುತ್ತ ಗಡಿಬಿಡಿಯಿಂದ ಗೂಡುಗಳ ಕಡೆಗೆ ಸಾಗಿವೆ. ಪಡುವಣ ಗಾಳಿಯು ಸುಳ್ಳನೆ ಸುಳಿಯ ತೊಡಗಿದೆ. ಇಂಥ ಹೊತ್ತಿನಲ್ಲಿ ಬಾದಶಹನ ತಾಲೂಕದಾರನಾದ ಇಬ್ರಾಹಿಮಖಾನನೂ ಮತ್ತು ತಹಶೀಲದಾರನಾದ ಹಿರಾಸಿಂಗನೂ ರಾಣಿಯ ಸಮೀಪಕ್ಕೆ ಬರತೊಡಗಿದ್ದರು. ಹಿಂದೆರಡು ಮೈಲು ದೂರ ಇರಬಹುದು. ಇಂಗ್ರಜರ ಸೈನ್ಯದ ಹೆಸರನ್ನು ಕೇಳಿದ ಕೂಡಲೆ ಊರೊಳಗಿನ ಇನಾಮದಾರರೂ ಸೆಟ್ಟಿ-ಸಾವುಕಾರರೂ ಭಯಭೀತರಾಗಿ, ಮನೆ-ಮಾರು ಬಿಟ್ಟುಗೊಟ್ಟು ಓಡಿ ಹೋಗಬಹುದೆಂದೂ, ಅನಂತರ ತಾವು ತಮ್ಮ ಅಲ್ಪಸ್ವಲ್ಪ ಜನರೊಡನೆ ಜಮೀನದಾರ ಪ್ರಭೃತಿ ಧನಿಕರ ಮನೆಯನ್ನು ಯಥಾಸ್ಥಿತವಾಗಿ ಲೂಟಿ ಮಾಡಬಹುದೆಂದೂ ಮೇಲಿನ ಇಬ್ಬರು ನೆನೆದಿದ್ದರು; ಆದರೆ ಸೀತಾಪುರದ ರಾಣಿಯು ಸ್ವತಃ ಯುದ್ಧಕ್ಕೆ ಸಜ್ಜಾಗಿದ್ದುದನ್ನು ನೋಡಿ, ಅವರು ಆಶ್ಚರ್ಯಚಕಿತರಾಗಿ ಬೊಟ್ಟು ಕಚ್ಚಿಕೊಂಡರು!

ಯುದ್ಧಮಾಡುವ ಪ್ರಸಂಗವು ಬಹುಶಃ ಬರುವದಿಲ್ಲೆಂದು ತಿಳಿದದ್ದರಿಂದ ಇಂಗ್ರಜೀ ಸೈನ್ಯವು ಇನ್ನೂ ವರೆಗೆ ಯುದ್ಧಕ್ಕೆ ಎದುರಾಗುವಷ್ಟು ಸಜ್ಜಾಗಿದ್ದಿಲ್ಲ. ಇಬ್ರಾಹಿಮಖಾನನೂ, ಹಿರಾಸಿಂಗನೂ ಆಂಗ್ಲಸೇನಾಪತಿಯಾದ ಮೇಜರ ಸ್ಮಿಥನನ್ನು ಕುರಿತು ಹೇಳತೊಡಗಿದ್ದೇನಂದರೆ:—"ಹುಜೂರ, ಈ ಪ್ರಾಂತದ ಜನರು ಬಹು ಲಂಡರಿರುವರು. ಮಹಾರಾಜ ದಿಗ್ವಿಜಯಸಿಂಹನೂ ಮತ್ತು ರಾಜಾ ಹರಪಾಲಸಿಂಹನೂ ಬಾದಶಹನಿಗೆ ಎಂದೂ ಕರವನ್ನು ಕೊಡಲಿಲ್ಲ. ಬಹರ್ಾನಮುಲ್ಕನ ಕಾಲಕೀರ್ದಿಯಿಂದ ಇಂದಿನ ವರೆಗೆ ಒಬ್ಬರೂ ಇವರ ಕಡೆಯಿಂದ ಕರವನ್ನು ವಸೂಲ ಮಾಡಲಿಲ್ಲ; ಮಾಡಲಿಕ್ಕೆ ಸಮರ್ಥರೂ ಆಗಲಿಲ್ಲ. ಇತ್ಯಾದಿ" ಸಂಭಾಷಣವನ್ನು ಮಾಡುತ್ತ

ದ್ದರು. ಅತ್ತ ರಾಣಿಯ ಸೈನ್ಯವು 'ಜಯ ಸೀತಾರಾಮಕಿ ಜಯ! ಜಯ ಮಹಾರಾಣಿಕೀ ಜಯ! ಜಯ್ ಜಯ್!' ಇತ್ಯಾದಿ ಹಿಂದೀ ಸವನೆ ಜಯಘೋಷಗಳನ್ನು ಮಾಡುತ್ತಿದ್ದಿತು.

ಮೇಜರ ಸ್ಮಿಥನೆಂದರೆ ಬಲು ಜಾಣ ಸೇನಾಪತಿಯಿದ್ದನು. ಅಯೋಧ್ಯೆಯ ವಸೂಲಿಯನ್ನು ಲಷ್ಕರಿಯ ಸಹಾಯದಿಂದ ಮಾಡುವ ಸಮಯವೊದಗಿದಲ್ಲಿ ಸೇನಾಪತಿಯು ಅತ್ಯಂತ ಹುಷಾರಿಯಿಂದ ಹಿಂದೂ ಗುಂಡು ಹೊಡೆಯದೆ, ಕೇವಲ ಭೀತಿಯ ಪ್ರದರ್ಶನವನ್ನು ಮಾಡಿ, ಅಯೋಧ್ಯೆಯ ದೀನರೂ ಅಂಜುಬುರುಕರೂ ಆದ ಪ್ರಜೆಗಳನ್ನು ಬೆದರಿಸಿ, ಯುಕ್ತಿ-ಪ್ರಯುಕ್ತಿಗಳಿಂದ ತಮ್ಮ ಕಾರ್ಯಭಾಗವನ್ನು ಸಾಧಿಸತಕ್ಕದ್ದೆಂದು ಗವ್ಹರ್ನರಜನರಲ್ಲನ ಸ್ಪಷ್ಟವಾದ ಹುಕುಮಿತ್ತು. ಅದರಂತೆ ಇಂಗ್ಲಿಷರ ಸುಳ್ಳು ತೋಫಿನ ಸಪ್ಪಳವನ್ನು ಕೇಳಿದ ಮಾತ್ರದಿಂದಲೇ ಎಷ್ಟೋ ಜಳ್ಳದೆಯ ಹಿಂದೂ ಸರದಾರರು ಬೆದರಿಬೆಂಡಾಗಿ ದಾರಿಸಿಕ್ಕತ್ತ ಓಡಿಹೋದಂಥ ಅನುಭವವಾದರೂ ಮೇಜರ ಸ್ಮಿಥನಿಗೆ ಚೆನ್ನಾಗಿತ್ತು. ಕಾರಣ ಆತನು ಸೈನ್ಯದ ರಚನೆಯನ್ನು ಚೆನ್ನಾಗಿ ಮಾಡದೆ, ಸುಳ್ಳು ತೋಫಿನ ಸಪ್ಪಳವನ್ನು ಮಾಡಲಿಕ್ಕೆ ತನ್ನ ಜನರಿಗೆ ಆಜ್ಞಾಪಿಸಿದನು; ಆದರೆ ಆಂಗ್ಲ ಸೇನಾಪತಿಯು ಎಂದಿನ ಅನುಭವದಂತೆ ಇಂದು ಮಾತ್ರ ನಾರಾಯಣಕುಮಾರಿಯ ಸೈನ್ಯವು ಇಂಗ್ಲಿಷರ ತೋಫಿನ ಸಪ್ಪಳಕ್ಕೆ ಬೆದರದೆ, ಹುರುಪುಗೊಂಡು ತಮ್ಮ ತೋಫುಗಳನ್ನು ಪ್ರತಿಯಾಗಿ ಹಾರಿಸತೊಡಗಿತು. ಇಂಗ್ರಜರ ಸೈನ್ಯವು ಪೂರ್ಣ ತಯಾರಿಯಿಂದಿಲ್ಲದ್ದರಿಂದ ಅವರಲ್ಲಿಯ ಎಷ್ಟೋ ಸೈನ್ಯವು ನಾಶವಾಯಿತು ರಾಣಿಯ ಸೇನಾಪತಿಯಾದ ಗಯಾಪ್ರಸಾದನು ಯುದ್ಧಕಲೆಯಲ್ಲಿ ಅತ್ಯಂತ ಪ್ರವೀಣನಿದ್ದನು. ಮಹಾರಾಜ ದಿಗ್ವಿಜಯಸಿಂಹನ ಬಲಗೈಯೆಂದು ಆತನು ಹೆಸರುವಾಸಿಯಾಗಿದ್ದು, ಅನೇಕ ಯುದ್ಧಪ್ರಸಂಗಗಳಲ್ಲಿ ಕಡು ಪರಾಕ್ರಮವನ್ನು ತೋರ್ಪಡಿಸಿದ್ದನು ಅವನು ಬಿಟ್ಟಂಥ ಹಿಂದಾದರೂ ಗುಂಡು ಬಹುಶಃ ಹುಸಿಯಾಗುತ್ತಿದ್ದಿಲ್ಲ. ಬಾದಶಹನ ತಹಸೀಲದಾರನಾದ ಹಿರಾಸಿಂಹನು ಇಂಗ್ರಜೀ ಸೈನ್ಯದ ಹಿಂಬದಿಯಲ್ಲಿ ಹಿಂದು ಆನೆಯ ಮೇಲೆ ಕುಳಿತು ಸೇನಾಪತಿಯಾದ ಸ್ಮಿಥನ ಸಂಗಡ ಏನೇನೋ ಗಿಟಗುಟ್ಟುತ್ತಿರುವದನ್ನು ದೂರಿಂದ ನೋಡಿದ ಗಯಾಪ್ರಸಾದನು

ಗುರಿಯಿಟ್ಟು ಒಂದು ಗುಂಡನ್ನು ಹಾರಿಸಿದನು. ಕೂಡಲೆ ಅದು ಹಿರಾಸಿಂಹನ ಹೃದಯವನ್ನು ಪ್ರವೇಶಿಸಿ ಅವನನ್ನು ಆತನ ಪೂರ್ವ ಜರ ಭೆಟ್ಟಿಗೆ ಕಳುಹಿಸಿತು! ವೀರಾಗ್ರಮುಖ್ಯಸ್ಥರಲ್ಲಿ ಒಬ್ಬನು ಪತನವಾದದ್ದನ್ನು ನೋಡಿ ನಾರಾಯಣಕುಮಾರಿಯ ದಳವು ಮತ್ತಷ್ಟು ಹುರುಪುಗೊಂಡು 'ಜಯ! ಮಹಾರಾಣೀಕಿ ಜಯ!!' ಎಂದು ಗರ್ಜಿಸುತ್ತ ವೈರಿಗಳೊಡನೆಗೆ ಅತಿ ನಿಕರದಿಂದ ಕಾದಲಾರಂಭಿಸಿತು ಸೀತಾಪುರದ ಸೈನ್ಯದ ಈ ಸಾಹಸವನ್ನು ನೋಡಿ ಇಂಗ್ರೇಜ ಸೈನ್ಯವು ದಂಗುಬಡಿದು ನಿಂತಿತು!

---

## ತಕ್ಕ ಫಲ.



ಉಭಯ ಸೈನಿಕರ ನಡುವೆ ಸುಮಾರು ತಾಸಿನ ವರೆಗೆ ಒಳ್ಳೇ ನಿಕರದಿಂದ ಯುದ್ಧವೆಸಗಿದ ಬಳಿಕ, ರಾಣಿಯ ಎಷ್ಟೋ ಸೈನಿಕರು ವೀರಸ್ವರ್ಗವನ್ನೈದಿದರು. ಆಂಗ್ಲರ ಶಿಸ್ತಿನ ದೊಡ್ಡ ಸೈನ್ಯದ ಮುಂದೆ ಇನ್ನು ಮಾತ್ರ ತಮ್ಮ ಆಟವು ಸಾಗದೆಂದು ತಿಳಿದು ಒಬೊಬ್ಬರೇ ಮೆಲ್ಲಗೆ ಹಿಂಜರಿಯ ಹತ್ತಿದರು. ತಮ್ಮ ಜನರನ್ನು ಉತ್ಸಾಹಿಸುವ ದಳಸ್ಕೋಸುಗ ಗಯಾಪ್ರಸಾದನೂ ಮತ್ತು ಕಲ್ಯಾಣಸಿಂಹನೂ ಶಕ್ತಿ ಮೀರಿ ಯತ್ನಿಸಿದರು; ಮೇಲಿಂದ ಮೇಲೆ ಉತ್ತೇಜಿತ ವಚನಗಳನ್ನು ನುಡಿಯುತ್ತಿದ್ದರು; ಆದರೆ ಇಂಗ್ಲಿಷರ ತೋಫಿಗೆ ಆಹುತಿಯಾಗಿ ಪ್ರಾಣ ಕಳಕೊಳ್ಳಲಿಕ್ಕೆ ಅಂಜಿದ ಸೈನಿಕರು, ದಾರಿ ಸಿಕ್ಕತ್ತ ಓಡತೊಡಗಿದರು; ಆದರೆ ರಾಣಿಯು ಮಾರ್ಗವನ್ನು ಮೊದಲೇ ಅಡ್ಡಗಟ್ಟಿ ಕುಳಿತದ್ದರಿಂದ, ಎಲ್ಲ ಸೈನಿಕರು ಬಹುಶಃ ಉತ್ತರದಿಕ್ಕಿಗೆ ಓಡತೊಡಗಿದರು. ಅಷ್ಟರಲ್ಲಿ ಕರ್ಮ-ಧರ್ಮ ಸಂಯೋಗದಿಂದ ಭಯಂಕರ ಬಿರುಗಾಳಿಯು ಬೀಸಿ, ಆಕಾಶವು ಹರಿದು ಬಿದ್ದಂತೆ ಧೋ-ಧೋ ಎಂದು ಒಂದೇಸವನೆ ಮಳೆಯು ಸುರಿಯಲಾರಂಭಿಸಿದ್ದರಿಂದ ಉಭಯ ಸೈನಿಕರೆಲ್ಲ ಗತಿಗಟ್ಟು ಹೋದರು. ರಾಣಿಯ ಸೈನ್ಯವು ಉತ್ತರಕ್ಕೆ ಓಡಿಹೋದದ್ದನ್ನು ನೋಡಿದ ಮೇಜರ ಸ್ಮಿಥನು ಇಬ್ರಾಹಿಮಖಾನನನ್ನು ಕುರಿತು: "ಈ ಜನರು ನೇಪಾಳದ ಕಡೆಗೆ ಓಡಿ ಹೋದರೆಂಬಂತೆ ತೋರುತ್ತದೆ ಬಂದಮೇಲೆ ನಾವು ಈಗ

ಏನು ಮಾಡಬೇಕು? ಸೀತಾಪುರದ ಮೇಲೆ ಹಲ್ಲೆಯನ್ನು ಮಾಡೋಣವೋ ಹೇಗೆ?''

"ಹುಜೂರ! ತಾವು ಇಷ್ಟೆಲ್ಲ ಸೈನ್ಯದೊಡನೆ ನದಿಯನ್ನು ದಾಟಿ ಹೋಗುವದೇನೂ ಅವಶ್ಯಕತೆಯಿಲ್ಲ. ಕಿಲ್ಲೆಯೊಳಗಿನ ಎಲ್ಲ ಜನರೂ ಇಷ್ಟರಲ್ಲಿ ಓಡಿ ಹೋಗಿರಬಹುದು. ನಾನು ನನ್ನ ಸ್ವಲ್ಪ ಜನರ ಸಹಾಯದಿಂದ ಕೈತರ ವಶೂಲಿಯನ್ನು ಮಾಡಲಾಪೆನು. ಈ ಕ್ಷುಲ್ಲಕ ಸಂಗತಿಯ ಬೆಸೆಯಿಂಗ ತನ್ನ ಜನರಿಗೆ ತ್ರಾಸ ಕೊಡುವದು ನನಗೆ ಪ್ರಶಸ್ತವಾಗಿ ತೋರುವದಿಲ್ಲ'' ಎಂದು ನುಡಿದನು.

ಮೊದಲೇ ಮಾಘ ಮಾಸವು. ಥಂಡಿಯು 'ನಾ-ನಾ' ಎನ್ನುತ್ತಿತ್ತು. ಅದರಲ್ಲಿ ಮಳೆಯು ಅಂದಬಳಿಕ ಕೇಳುವದೇನು? ಹವೆಯು ಅತ್ಯಂತ ಶೀತವಾಗಿತ್ತು. ಇಂಥ ಬಲವಾದ ಚಳಿಯಲ್ಲಿ ರಾತ್ರಿಯ ಹೊತ್ತಿನಲ್ಲಿ ನದಿಯನ್ನು ದಾಟಿ ಸೀತಾಪುರಕ್ಕೆ ಹೋಗಲು, ಮೇಜರ ಸ್ಮಿಥನು ನಿಜವಾಗಿಯೇ ಉತ್ಸುಕನಿದ್ದಿಲ್ಲವಾದ್ದರಿಂದ, ಇಬ್ರಾಹಿಮನ ಮಾತಿಗೆ ಆತನು ಕೂಡಲೆ ಸಮ್ಮತಿಸಿದನು; ಮತ್ತು ಕಿಂಚಿತ್ ದೂರದಲ್ಲಿರುವ ಬೇರೊಂದು ಪೇಟೆಯಲ್ಲಿ ಅಂದಿನ ರಾತ್ರಿಯನ್ನು ಕಳೆದು, ಮಾರನೆಯ ದಿವಸ ಬೇರೂಚ ಎಂಬಲ್ಲಿಯ ತಾಲೂಕದಾರನ ವಿನಂತಿಯ ಮೇರೆಗೆ ಆತನಿಗೆ ಸಹಾಯ ಮಾಡುವದಕ್ಕೆಂದು ಅತ್ತ ಕಡೆಗೆ ತನ್ನ ಸೈನ್ಯವನ್ನು ತಿರುಗಿಸಿದನು.

ಮೇಜರ ಸ್ಮಿಥನು ತನ್ನ ಅಭಿಪ್ರಾಯಕ್ಕೆ ಒಮ್ಮೆಲೆ ಸಮ್ಮತಿಸಿದ್ದನ್ನು ನೋಡಿ, ಇಬ್ರಾಹಿಮಖಾನನು ಮನದಲ್ಲಿಯೇ ಹಿರಿಹಿರಿ ಹಿಗ್ಗಿದನು. ಈ ಆನಂದಕ್ಕೆ ಹಿರಾಸಿಂಗನ ವೃತ್ತ್ಯವೂ ಬಹ್ವಂಶದಿಂದ ಕಾರಣವಾಗಿತ್ತೆಂದು ಹೇಳಬಹುದು. ಯಾಕಂದರೆ ಹಿಂದಕ್ಕೆ ಇಂಗ್ಲಿಷರ ಸೈನ್ಯಕ್ಕೆ ಹೆದರಿ, ಎಲ್ಲ ಜನರು ಓಡಿಹೋದ ಕೂಡಲೆ, ಸೀತಾಪುರದ ಅತ್ಯಂತ ಶ್ರೀಮಂತ ಜಹಾಗೀರದಾರನಾದ ದಿಗ್ವಿಜಯಸಿಂಗನ ಮನೆಯಲ್ಲಿ ಅಗಣಿತವಾಗಿದ್ದ ಅಮೂಲ್ಯ ವಸ್ತು-ಒಡವೆಗಳನ್ನು ಹಿರಾಸಿಂಗನು ಹಿಂದಕ್ಕೊಮ್ಮೆ ತನ್ನ ಸೇವಕರೊಡನೆ ಎತ್ತಿ ಬಡಿದಿದ್ದು, ಹಿಂದಿನಿಂದ ಆ ಸುಲಿಗೆಯನ್ನು ಖಾನನೂ, ತಾನೂ ಹಂಚಿಕೊಳ್ಳಬೇಕೆಂದು ಗೊತ್ತಾಗಿತ್ತು; ಆದರೆ ಹಿರಾಸಿಂಗನು ಪ್ರಾಮಾಣಿಕತನದಿಂದ ನಡೆಯಬಹುದೆಂದು ಇಬ್ರಾಹಿಮಖಾನನಿಗೆ ಖಾತ್ರಿಯಿದ್ದಿಲ್ಲ.

ಎಲ್ಲಿ ಈ ಹರಾಮನು ಆ ಬೆಲೆಯುಳ್ಳ ಉತ್ತಮೋತ್ತಮ ಒಡವೆಗಳನ್ನು ತಾನೊಬ್ಬನೇ ಎತ್ತಿ ಒಡೆಯುವನೋ, ಎಂಬ ಅಂಜಿಕೆಯು ಇಬ್ರಾಹಿಮಖಾನನನ್ನು ಬಲು ಬಾಧಿಸುತ್ತಿತ್ತು. ನಬಾಬರ ಕಾಲಕಿರ್ದಿಯಲ್ಲಿ ರಾಜ್ಯದೊಳಗಿನ ಸಣ್ಣ-ದೊಡ್ಡ ಅಧಿಕಾರಿಗಳು ಹೊರಹೊರಗೆ ಪರಸ್ಪರರು ಅತುಲ ಪ್ರೇಮ-ವಿಶ್ವಾಸಗಳ ಪ್ರದರ್ಶನವನ್ನು ತೋರಿಸುತ್ತಿದ್ದರೂ, ಒಳಗಿಂದೊಳಗೆ ಪ್ರತಿಯೊಬ್ಬರು ಎರಡನೆಯವರನ್ನು ಘಾತಿಸುವದಕ್ಕೋಸ್ಕರ ಕಣ್ಣಲ್ಲಿ ಎಣ್ಣೆಯನ್ನು ಹಾಕಿಕೊಂಡು ಜಪ್ಪಿಸುತ್ತಿದ್ದರು. ಅದರಂತೆಯೇ ಇಬ್ರಾಹಿಮಖಾನ-ಹಿರಾಸಿಂಗರ ಸಖ್ಯವಿತ್ತು. ಹಿರಾಸಿಂಗನು ಈಗ ಖಾನನನ್ನು ಪೂರಾ ವಂಚಿಸಿಬಿಟ್ಟನು. ಆದ್ದರಿಂದ ಆತನ ಮರಣದಿಂದ ಖಾನನಿಗೆ ಆನಂದವೆನಿಸಿತು. ಸೀತಾಪುರದಲ್ಲಿಯ ಎಲ್ಲ ಚೀಜವಸ್ತುಗಳಿಗೆ ತಾನೊಬ್ಬನೇ ಮಾಲಕನೆಂದು ಆತನು ಹಿಗ್ಗಿದನು. ತನಗೆ ದೊರೆಯುತ್ತಕ್ಕ ಲಾಭದ ಭಾಗೀದಾರರು ಅನ್ಯರಾರೂ ಇರಬಾರದೆಂತಲೂ, ತನಗೊಬ್ಬನಿಗೇ ಲೂಟಿಯ ಮೇಲೆ ಮನಸೋಕ್ತ ಉಡಾಡಲಿಕ್ಕೆ ಬರಬೇಕೆಂತಲೂ ಇಬ್ರಾಹಿಮಖಾನನ ಕೋರಿಕೆಯಿತ್ತು. ಅಂತೆಯೇ ಆತನು ಮೋಜರ ಸ್ಮಿಥನಿಗೆ ಪರಿಪರಿಯಿಂದ ವಿನಂತಿ ಮಾಡಿಕೊಂಡು, ಆತನನ್ನು ಎರಡನೆಯ ಕಡೆಗೆ ಅಟ್ಟಿದನು.

ಮೋಜರ ಸ್ಮಿಥನು ಹೊರಟು ಹೋದ ಬಳಿಕ, ಇಬ್ರಾಹಿಮಖಾನನು ತನ್ನ ಮೂವತ್ತು-ನಾಲ್ವತ್ತು ಜನರೊಡನೆ ವಿಜಯಗಂಜದ ಪೇಟೆಯನ್ನು ಬಲು ಸಂಭ್ರಮದಿಂದ ಪ್ರವೇಶಿಸಿದನು; ಆದರೆ ಅಲ್ಲೇನಿದೆ? ಪೇಟೆಯೆಲ್ಲ ಹಾಳು ಸುರಿಯುತ್ತಿತ್ತು! ಪೇಟೆಯ ಭಯಾನಕ ಸ್ಥಿತಿಯನ್ನು ನೋಡಿ ಇಬ್ರಾಹಿಮಖಾನನು ಮನದಲ್ಲಿಯೇ ಅನ್ನುತ್ತಾನೆ: ಸೀತಾಪುರದ ಗತಿಯಾದರೂ ಹೀಗೆಯೇ ಆಗಿರಬಹುದು. ಜನರೆಲ್ಲರೂ ಪ್ರಾಣಾಪಾಯದ ಭಯದಿಂದ ಓಡಿ ಹೋಗಿರಬಹುದು. ಇಲ್ಲಿಯೇ ಅಂಗಡಿಯ ಮಳಿಗೆಯಲ್ಲಿ ತುಸ ವಿಶ್ರಾಂತಿಯನ್ನು ತೆಗೆದುಕೊಂಡು, ಒಳ್ಳೇ ನಸುಕಿನಲ್ಲಿಯೇ ಸೀತಾಪುರವನ್ನು ಪ್ರವೇಶಿಸಬೇಕೆಂದು ನಿಶ್ಚಯಿಸಿ, ಆತನು ತುಸ ಅಡ್ಡಾದನು; ಆದರೆ ಇಂದು ಆತನಿಗೆ ಮೈಮುರಿ ದಣುವಾಗಿದ್ದರೂ ನಿದ್ರೆಯೇ ಬರಲೊಲ್ಲದು. ದಿಗ್ವಿಜಯಸಿಂಹನ ಕಿಲ್ಲೆಯಲ್ಲಿಯ ಅತ್ಯಂತ ಬೆಲೆಯುಳ್ಳ ಮುತ್ತು-

ರತ್ನಗಳೂ, ಅಪರೂಪವಾದ ವಸ್ತು-ಒಡವೆಗಳೂ, ಅಮೂಲ್ಯ ರತ್ನಾಭರಣಗಳೂ ಆತನ ಕಣ್ಣು ಮುಂದೆ ಕಟ್ಟಿದಂತೆ ಆಗಿದ್ದವು. ಬಹಳವೇನು? ಕಿಲ್ಲೆಯಲ್ಲಿಯ ರಾಜಮಹಾಲಿನ ಕಾಶ್ಮೀರೀ ಸಂಗಮರವರಿಯ ಕಲ್ಲುಗಳು ಕೂಡ ಆತನಿಗೆ ಬಹು ರಮಣೀಯವಾಗಿ ತೋರಹತ್ತಿದವು. ಆ ಮಹಾಲನ್ನೇ ನೆಲಸಮ ಮಾಡಿ ಆ ಸುಂದರ ಕಲ್ಲುಗಳನ್ನು ಒಯ್ದು, ತಾನು ಕೂಡ್ರುವ ಕಟ್ಟೆಯನ್ನು ಮಾಡಬೇಕೆಂದು ಆ ಅಂಗಡಿಯ ಮಳಿಗೆಯಲ್ಲಿಯೇ ಆತನು ದೃಢನಿಶ್ಚಯವನ್ನು ಮಾಡಿದನು. ಯಾವಾಗ ಸೀತಾಪುರವನ್ನು ಹೊಕ್ಕು, ಅಲ್ಲಿಯ ಉತ್ತಮೋತ್ತಮ ಒಡವೆಗಳನ್ನು ಅಪಹರಿಸುವೆನೋ, ಎಂದು ಆತನ ಮನಸ್ಸಿಗೆ ಒಂದೇಸವನೆ ಹುರು-ಹುರು ಎನಿಸುತ್ತಿತ್ತು. ಈ ವಿಚಾರದಲ್ಲಿ ಅವನಿಗೆ ಏನು ಮಾಡಿದರೂ ಕಣ್ಣಿಗೆ ಕಣ್ಣು ಹತ್ತಲೊಲ್ಲದು.

ಇಂತು ಇಬ್ರಾಹಿಮಖಾನನು ಮನೋರಾಜ್ಯದಲ್ಲಿಯ ಸುಂದರ ಇಮಾರತಿಯಲ್ಲಿ ಸ್ವೈರವೃತ್ತಿಯಿಂದ ಭ್ರಮಿಸುತ್ತಿರಲು, ಅರ್ಧಕರ್ಧ ರಾತ್ರಿಯು ಸರಿಯಿತು ಆಕಾಶವು ನಿರಭ್ರವಾದದ್ದರಿಂದ ಚಂದ್ರಮನ ಸುಶಾಂತ ಪ್ರಕಾಶದಿಂದ ಆ ಪ್ರಾಂತವೆಲ್ಲ ಸುಶೋಭಿತವಾಗಿ ತೋರಹತ್ತಿತು ಮಳೆಯಾದ್ದರಿಂದ ಒದರುವ ಕಪ್ಪೆಗಳ 'ಕಿಡರ್-ಕಿಡರ್' ಎಂಬ ಸಪ್ಪಳವೂ, ಗಿಡಗಳ ಗುಂಪಿನಲ್ಲಿರುವ ಕ್ರಿಮಿ-ಕೀಟಕಗಳ 'ಕಿರ್-ಕಿರ್' ಎಂಬ ಸಪ್ಪಳವೂ ಪ್ರಸ್ಥಾಪಿತವಾದ ನಿಶಾದೇವಿಯ ಶಾಂತತೆಯನ್ನು ಭಂಗಮಾಡುತ್ತಿದ್ದವು. ಇನ್ನು ಮಾತ್ರ ವ್ಯರ್ಥ ಕಾಲಹರಣ ಮಾಡುವದು ಇಬ್ರಾಹಿಮ ಖಾನನ ಹುರುಹುರುಗೊಂಡ ಮನಕ್ಕೆ ಪ್ರಶಸ್ತವೆನಿಸಲೊಲ್ಲದು. ಆಗ ಆತನು ಈಗಲೇ ತಳವನ್ನೆಬ್ಬಿಸಬೇಕೆಂದು ತನ್ನ ಜನರಿಗೆ ಆಜ್ಞಾಪಿಸಿದನು ಇಂತು ಇಬ್ರಾಹಿಮಖಾನನು ಸೀತಾಪುರಕ್ಕೆ ಹೋಗುವದಕ್ಕೆಂದು ತನ್ನ ಮೂವತ್ತು-ನಾಲ್ವತ್ತು ಜನರೊಡನೆ ಸರಿರಾತ್ರಿಯಾದ ಮೇಲೆ ವಿಜಯಗಂಜ ಪಟ್ಟಣದಿಂದ ಹೊರಹೊರಟನು

ಇತ್ತ ಮುಂಜಾನೆ ಸುಮಾರು ಒಂದು ಪ್ರಹರ ಹೊತ್ತೇರಿದ ಮೇಲೆ ಕಿಲ್ಲೆಯನ್ನು ಬಿಟ್ಟು ಹೋಗಿದ್ದ ನಾರಾಯಣಕುಮಾರಿಯು ಇಂಗ್ರೇಜರ ಸಂಗಡ ಆದ ಚಕಮಕಿಯಲ್ಲಿ ಉಳಿದ ಸುಮಾರು ಎರಡು ನೂರು ಜನರೊಡನೆ ಮಧ್ಯರಾತ್ರಿಯ ಸುಮಾರಕ್ಕೆ ತಿರುಗಿ ಕಿಲ್ಲೆ

ಯನ್ನು ಸೇರಿದ್ದಳು. ಇಷ್ಟು ಹೊತ್ತಿನ ವರೆಗೆ ಅವಳು ಒಂದು ನೀರಿನ ಹನಿಯನ್ನು ಕೂಡ ಸ್ಪರ್ಶಮಾಡಿದ್ದಿಲ್ಲ ಇತ್ತ ರಾಣಿಯ ತಂಗಿಯಾದ ಚಾಂದಕುಮಾರಿಯಾದರೂ ಅಂದಿನ ದಿವಸವನ್ನೆಲ್ಲ ಅತ್ಯಂತ ಅಸ್ವಸ್ಥತೆಯಿಂದ ಕಳೆದಿದ್ದಳು. ಅಕ್ಕನ ವಿಷಯದ ಚಿಂತಾತಿರೇಕದಿಂದ ವ್ಯಗ್ರವಾದ ಮನಸುಳ್ಳ ಚಾಂದಕುಮಾರಿಗೆ ಅಂದಿನ ದಿವಸವು ಒಂದು ದೀರ್ಘಯುಗದಂತೆ ಭಾಸವಾಯಿತು ಸೂರ್ಯಾಸ್ತವಾಗಿ ಕತ್ತಲೆಯು ಬೀಳಹತ್ತಿದಂತೆ ಆಕೆಯ ಮನಸ್ಸಿನ ಅಸ್ವಸ್ಥತೆಯು ಅಧಿಕಾಧಿಕವಾಗಿ ಹೆಚ್ಚುತ್ತ ಸಾಗಿತು ನಾನಾಪ್ರಕಾರದ ಕುಶಂಕೆಗಳಿಂದಲೂ, ದುಸ್ವಪ್ನಗಳಿಂದಲೂ, ಭೀತಿಯಿಂದಲೂ ಆ ಕೋಮಲ ತರುಣಿಯು ವ್ಯಗ್ರವಾಗಿದ್ದಳು. ಆಕೆಯು ಸೀತಾಪುರದ ಕಿಲ್ಲೆಯಲ್ಲಿದ್ದರೂ ಇಡೀ ದಿವಸ ಅವಳ ಮನಸ್ಸು ನಾರಾಯಣಕುಮಾರಿಯ ಬೆನ್ನ ಹಿಂದಿನಿಂದಲೇ ಸಾಗಿತ್ತು. ಆಕೆಯ ದೃಷ್ಟಿಯೆಲ್ಲ ವಿಜಯಗಂಜದ ಹಾದಿಯ ಕಡೆಗೇ ಇತ್ತು. ನಿಶಾಸಾಮ್ರಾಜ್ಯವು ಬೆಳೆಬೆಳೆದಂತೆ ಚಾಂದಕುಮಾರಿಯು ಅತಿಶಯ ಚಿಂತಾಭಯ ಮುಖ-ಮುದ್ರೆಯಿಂದ ಹುಚ್ಚು ಹಿಡಿದವರಂತೆ ಒಮ್ಮೆ ಮಹಾಲಿನ ಹೊರಗೂ, ಮತ್ತೊಮ್ಮೆ ಒಳಗೂ, ಒಮ್ಮೆ ದಿವಾಣಖಾನೆಯಲ್ಲಿಯೂ, ಇನ್ನೊಮ್ಮೆ ತಂದೆಯ ಹಾಸಿಗೆಯ ಹತ್ತರವೂ; ಒಮ್ಮೆ ಸೀತಾರಾಮನ ಮಂದಿರದಲ್ಲಿಯೂ ಮಗುದೊಮ್ಮೆ ವಿಜಯಗಂಜದ ಮಾರ್ಗದ ಕಡೆಗೂ ಹೀಗೆ ಒಂದೇಸವನೆ ತಾಯಿಯನ್ನು ತಪ್ಪಿಸಿಕೊಂಡ ಆಕಳ ಕರುವಿನಂತೆ ಎಡತಾಕುತ್ತಿದ್ದಳು. ಮಧ್ಯರಾತ್ರಿಯಾಗುತ್ತ ಒಂದರೂ ನಾರಾಯಣಕುಮಾರಿಯ ವಾರ್ತೆಯೇ ಇಲ್ಲದ್ದನ್ನು ನೋಡಿ, ಅಕ್ಕನು ನಿಜವಾಗಿಯೂ ಶತ್ರುಗಳ ವಶವಾಗಿರಬಹುದೆಂದು ನೆನೆದು, ಆ ವ್ಯಥಿತಾಂತಃಕರಣೆಯಾದ ಕುಮಾರಿಯು ಬಿಕ್ಕಿ ಬಿಕ್ಕಿ ಅಳಹತ್ತಿದಳು. ಅವಳ ದುಃಖಾವೇಗವು ಹೊಟ್ಟೆಯಲ್ಲಿ ಹಿಡಿಸದಾಯಿತು

ಅಷ್ಟರಲ್ಲಿ ಕಿಲ್ಲೆಯಲ್ಲಿ ಜನರ ಗಡಬಿಡಿಯು ಕೇಳಿಸತೊಡಗಿತು. ತಾಲೂಕದಾರನೇ ಪ್ರವೇಶಿಸಿದನೋ ಏನೋ, ಎಂಬ ಕುಶಂಕೆಯೂ ಆ ಧೀರ ತರುಣಿಯನ್ನು ಬಾಧಿಸದೆ ಬಿಡಲಿಲ್ಲ. ಏನೇ ಆಗಲಿ, ಹೊರಗೆ ಹೋಗಿ ನೋಡಿಯೇ ಬಿಡಬೇಕೆಂದು ತನ್ನ ಇದ್ದಬಿದ್ದ ಧೈರ್ಯವನ್ನೆಲ್ಲ ಒಟ್ಟುಗೂಡಿಸಿ ನಿಶ್ಚಯಿಸಿದ ಚಾಂದಕುಮಾರಿಯು ಹೊರಗೆ

ಬಂದು ನೋಡಲು, ನಾರಾಯಣಕುಮಾರಿಯು ರಾಜಮಹಾಲಿನ ತಲೆಬಾಗಿಲ ಮುಂದೆ ನಿಂತಿದ್ದಳು. ಅಕ್ಕನು ದುಷ್ಟರ ದವಡೆಯೊಳಗಿಂದ ಪಾರಾಗಿ ಸುರಕ್ಷಿತವಾಗಿ ಮನೆಗೆ ಬಂದದ್ದನ್ನು ನೋಡಿದ ಕೂಡಲೆ ಚಾಂದಕುಮಾರಿಯ ಅಂತಃಕರಣವು ಉತ್ತರಿಸಿತು. ಹತ್ತೆಂಟು ವರುಷಗಳಿಂದ ತಾಯಿಯನ್ನು ಅಗಲಿದ ಬಾಲಕರಂತೆ ಓಡುತ್ತ ಹೋಗಿ ಅವಳು ಅಕ್ಕನನ್ನು ತಬ್ಬಿಕೊಂಡಳು. ಇಬ್ಬರ ಕಣ್ಣೊಳಗಿಂದಲೂ ಅಶ್ರುಪಾತವಾಗಹತ್ತಿ ಇಬ್ಬರೂ ಕೆಲಕಾಲ ದೇಹಭಾನವನ್ನು ಮರೆತರು! ಕುತ್ತಿಗೆಯ ಶಿರಗಳು ಉಬ್ಬಿದ್ದರಿಂದ ಇಬ್ಬರ ಬಾಯಿಂದಲೂ ಮಾತುಗಳು ಹೊರಡಲೊಲ್ಲವು. ಕಿಂಚಿತ್ಕಾಲವು ಹೀಗೆಯೇ ಕ್ರಮಿಸಿದ ಮೇಲೆ ನಾರಾಯಣಕುಮಾರಿಯು ಅನ್ನುತ್ತಾಳೆ:-"ತಂಗಿ, ತಂದೆಯವರು ಹೇಗೆ ಇರುವರು? ಅವರಿಗೆ ಇದೆಲ್ಲ ರಹಸ್ಯವು ತಿಳಿಯಿತೋ ಹೇಗೆ?"

ಇಷ್ಟೊತ್ತಿನ ವರೆಗೆ ಚಾಂದಕುಮಾರಿಯಲ್ಲಿಯ ಮೊದಲಿನ ಆವೇಶವು ಕಡಿಮೆಯಾಗಿದ್ದರಿಂದ, ಅವಳೂ ದೇಹಸ್ಮೃತಿಯ ಮೇಲೆ ಬಂದಿದ್ದಳು. "ತಂದೆಯವರು ಮುಂಜಾನೆಯಿಂದ ಬೇಶುದ್ಧರಾಗಿಯೇ ಇರುವರು. ತಮ್ಮ ದೇಹದ ಪರಿವೆಯೇ ಇಲ್ಲದವರಿಗೆ ಇದೆಲ್ಲ ತಿಳಿಯುವ ಬಗೆ ಹೇಗೆ? ಆದರೆ ಅಕ್ಕಾ, ನಾನು ಮಾತ್ರ ಬಹಳೇ ಅಂಜಿಕೊಂಡಿದ್ದೆನು ಈಗಾದರೂ ಭೀತಿಯು ಪೂರ್ಣವಾಗಿ ಹೋಗಿಲ್ಲ ಇರಲಿ. ಅಲ್ಲಿ ಏನೇನಾಯಿತು ಹೇಳು, ನೋಡೋಣ? ನನ್ನ ಖೋಡಿ ಮನದಲ್ಲಿ ಹೇಳಲಶಕ್ಯವಾದ ಕಲ್ಪನೆಗಳು ಬಂದು ಹೋದವು!"

ತಂಗಿಯ ಅಧೀರ ಸ್ವಭಾವವನ್ನು ನೋಡಿದ ನಾರಾಯಣಕುಮಾರಿಯು ಗಂಭೀರ ಸ್ವರದಿಂದ "ಹೆದರಬೇಡ ಸೀತಾಪತಿಯ ಕೃಪೆಯಿಂದ ಎಲ್ಲ ಕಾರ್ಯಗಳೂ ಸುರಕ್ಷಿತವಾಗಿ ಜರುಗಿರುವವು; ಆದೆಲ್ಲ ಸಂಗತಿಯನ್ನು ಹಿಂದಿನಿಂದ ನಿನಗೆ ಹೇಳುತ್ತೇನೆ. ತಂದೆಯವರ ಹತ್ತರ ಹೋಗು; ನಾನು ಇದೇ ಈಗ ಬರುತ್ತೇನೆ." ಹೀಗೆ ಅಂದು, ಒಬ್ಬ ದಾಸಿಗೆ ಉಗೆದ ಬಟ್ಟೆಯನ್ನು ತೆಗೆದುಕೊಂಡು ಬರಲಿಕ್ಕೆ ತಿಳಿಸಿ, ಸ್ನಾನಕ್ಕೋಸ್ಕರ ಪುಷ್ಕರಿಣಿಯ ಕಡೆಗೆ ಸಾಗಿದಳು. ದಾಸಿಯು ಉಗೆದ ಬಟ್ಟೆಗಳನ್ನು ತೆಗೆದುಕೊಂಡು ರಾಣಿಯ ಬೆನ್ನು ಹತ್ತಿದಳು. ಆ ಮಾಘಮಾಸದ ಚಳಿಯಲ್ಲಿ ಮಧ್ಯರಾತ್ರಿಯಾದ

ಮೇಲೆ ಆ ವೀರವನಿತೆಯು ಪುಷ್ಕರಿಣಿಯಲ್ಲಿಯ ತಣ್ಣೀರಲ್ಲಿ ಮೈ ತೊಳ ಕೊಂಡಳು ಅನಂತರ ಹಾಗೆಯೇ ಸೀತಾರಾಮನ ಮಂದಿರಕ್ಕೆ ಹೋಗಿ ಐದುಸುತ್ತು ಭಕ್ತಿಯಿಂದ ಪ್ರದಕ್ಷಿಣೆಯನ್ನು ಹಾಕಿ ಶ್ರೀ ಸೀತಾಪತಿಗೆ ಅತ್ಯಂತ ಭಕ್ತಿಯಿಂದ ಸಾಷ್ಟಾಂಗವಾಗಿ ನಮಸ್ಕರಿಸಿದಳು. ತರುವಾಯ ಒದ್ದೆಯನ್ನು ಕಳೆದು ಒಗೆದ ಒಟ್ಟೆಯನ್ನು ಉಟ್ಟು ಕೊಂಡು ಮಿಣಿಮಿಣಿಯಾಗಿ ಎಣ್ಣೆಯ ದೀಪವು ಉರಿಯುತ್ತಿದ್ದ ಸೀತಾರಾಮನ ಗರ್ಭಗುಡಿಯಲ್ಲಿ ಶ್ರೀರಾಮನಾಮದ ಜಪವನ್ನು ಏಕಾಗ್ರತೆಯಿಂದ ಮಾಡುತ್ತ ಕುಳಿತುಕೊಂಡಳು.

ಇತ್ತ ಮುಂಜಾವಿನಿಂದ ನೀರಿನ ಒಂದು ಹನಿಯನ್ನು ಕೂಡ ಮುಟ್ಟದ ಚಾಂದಕುಮಾರಿಯು ಒಂದು ತಾಟಿನಲ್ಲಿ ಹಣ್ಣು-ಹಂಪಲ ಗಳನ್ನು ಮತ್ತೊಂದರಲ್ಲಿ ಉಳಿದ ಉಪಾಹಾರದ ಪದಾರ್ಥಗಳನ್ನೂ ಹಾಕಿಕೊಂಡು ಅಕ್ಕನ ಹಾದಿಯನ್ನು ನೋಡುತ್ತ ಕುಳಿತುಕೊಂಡಳು ಒಂದು ಗಳಿಗೆಯ ವರೆಗೆ ಸ್ನಾನಕ್ಕೆಂದು ಹೋದ ನಾರಾಯಣಕುಮಾರಿಯು ಬಾರದ್ದನ್ನು ನೋಡಿ, ಚಾಂದಕುಮಾರಿಯು ಸೀತಾರಾಮನ ಮಂದಿರಕ್ಕೆ ಬಂದಳು ತಂಗಿಯನ್ನು ನೋಡಿದ ಕೂಡಲೆ ನಾರಾಯಣಕುಮಾರಿಯು ಎದ್ದಳು ಇಂದಿನ ದಿವಸವನ್ನೆಲ್ಲ ನಿರಾಹಾರದಿಂದಲೇ ಕಳೆಯಬೇಕೆಂದು ನಾರಾಯಣಕುಮಾರಿಯು ನಿಶ್ಚಯಿಸಿದ್ದಳು; ಆದರೆ ತಾನು ಉಪವಾಸ ಮಲಗಿದರೆ, ಚಾಂದಕುಮಾರಿಯು ಏನೂ ತಿನ್ನುವದಿಲ್ಲವೆಂದು ತಿಳಿದು, ಆಕೆಯು ತನ್ನ ಹಟವನ್ನು ಬಿಟ್ಟಳು. ಇಬ್ಬರೂ ಕೂಡಿ ತುಸ ಫಲಾಹಾರವನ್ನು ಮಾಡಿ, ಮಲಗಿಕೊಂಡರು; ಮತ್ತು ಅಂದಿನ ದಿವಸ ಆ ಅಕ್ಕ-ತಂಗಿಯರಿಗೆ ನಿದ್ದೆಯೇ ಹತ್ತಲಿಲ್ಲ. ಇಡಿ ರಾತ್ರಿಯಲ್ಲಿ ವರ್ತಿಸಿದ ಸಂಗತಿಯನ್ನೆಲ್ಲ ಹೇಳುವದರಲ್ಲಿ-ಕೇಳುವದರಲ್ಲಿ ಕಳೆದರು ಬೆಳಗಾಗುತ್ತ ಬಂದರೂ ಅವರ ಮಾತೇ ಮುಗಿಯಲಿಲ್ಲ!

ಸುಮಾರು ಎರಡು ಗಳಿಗೆ ರಾತ್ರಿಯಿರಬಹುದು. ಶುಕ್ರನು ಆದೇ ಉದಯಿಸಿ, ಈತನೇನು ಬಾಲಚಂದ್ರಮನೋ ಏನೋ ಅನ್ನುವಂತೆ ಚಕಚಕಿಸುತ್ತ ಮೇಲಕ್ಕೇರತೊಡಗಿದ್ದಾನೆ. ಕೋಳಿಗಳು ಭೂತಲವನ್ನು ತನ್ನ ತೇಜಃಕಿರಣಗಳಿಂದ ಬೆಳಗುತ್ತಿರುವ ತರಣಿಯನ್ನು ಬೇಗನೆ ಬಾರೆಂದು ತಲೆಯನ್ನು ಹಾಕಿ ಹಾಕಿ, ಉಚ್ಚಸ್ವರ

ದಿಂದ ಕರೆಯುತ್ತಲಿವೆ ಪಕ್ಷಿಗಳು ಬಡಬಡಿಸಿಕೊಂಡು ಎಚ್ಚತ್ತು ಓದರತೊಡಗಿವೆ ಮುಂಜಾವಿನ ತಂಗಾಳಿಯು ಸುಳ್ಳನೆ ಸುಳಿಯು ತೊಡಗಿದೆ ಇಂಥ ಹೊತ್ತಿನಲ್ಲಿ ಇಬ್ರಾಹಿಮಖಾನನು ಮೂವತ್ತು-ನಾಲ್ವತ್ತು ಜನರೊಡನೆ ಕಿಲ್ಲೆಯ ಪೂರ್ವದ ತಲೆ ಬಾಗಿಲಕ್ಕೆ ಬಂದು ಮುಟ್ಟಿದನು ಈ ಸುಮಾರಕ್ಕೆ ತಲೆಬಾಗಿಲವನ್ನು ಇಬ್ಬರು ಶಿಪಾಯಿಯರು ಕಾಯುತ್ತಿದ್ದರು ಇನ್ನುಳಿದ ಎಲ್ಲ ಸೈನಿಕರೂ ಯುದ್ಧಮಾಡಿ ದಣಿದದ್ದರಿಂದ, ವಿಶ್ರಾಂತಿಯನ್ನು ತೆಗೆದುಕೊಳ್ಳುತ್ತಿದ್ದರು; ಆದರೆ ಗಯಾಪ್ರಸಾದನಿಗೂ, ಕಲ್ಯಾಣಸಿಂಹನಿಗೂ ಇಂದಿನ ದಿವಸ ನಿದ್ರೆಯೇ ಹತ್ತಿರಲಿಲ್ಲ ಸೈನಿಕರಿಗೆಲ್ಲ ಮಲಗಿಕೊಳ್ಳಲಿಕ್ಕೆ ತಿಳಿಸಿ, ಅವರು ಎಚ್ಚರದಿಂದ ಇದ್ದರು ಕಿಲ್ಲೆಯ ಮೊದಲನೇ ಭಾಗದಲ್ಲಿರುವ ಪಡಸಾಲೆಯಲ್ಲಿ ಶೀತನಿವಾರಣಾರ್ಥವಾಗಿ ಬೆಂಕಿಯನ್ನು ಹೊತ್ತಿಸಿ ಕಾಸುತ್ತ, ಏನೇನೋ ವಿಚಾರ ಮಾಡುತ್ತ ಕುಳಿತುಕೊಂಡಿದ್ದರು ಇಂಗ್ರಜರ ಸೈನ್ಯವು ಕಿಲ್ಲೆಯ ಮೇಲೆ ಬರಬಹುದೋ ಹೇಗೆ? ಬಂದರೆ ನಾವೇನು ಮಾಡಬೇಕು? ಆ ಆಂಗ್ಲ ಸೈನ್ಯಕ್ಕೆ ಎದುರಾಗುವ ಬಗೆ ಹೇಗೆ? ಎಂಬದನ್ನೇ ಅವರು ಚಿಂತಿಸುತ್ತಿದ್ದರು. ಅಷ್ಟರಲ್ಲಿ ಮಹಾದ್ವಾರದ ಮೇಲಿರುವ ಕಾವಲುಗಾರನೊಬ್ಬನು 'ವೈರಿಗಳ ಕಡೆಯ ಜನರು ಬಂದರು, ಸಾವಧರಾಗಿರಿ!' ಎಂದು ಓದರುತ್ತ ಓಡಿ ಬಂದನು ಗಯಾಪ್ರಸಾದ-ಕಲ್ಯಾಣಸಿಂಹರಂತೂ ಸಜ್ಜಾಗಿಯೇ ಇದ್ದರು. ಕೂಡಲೆ ಅವರು ತಮ್ಮ ಜನರನ್ನೆಲ್ಲ ಎಬ್ಬಿಸಿ, ಆಯುಧಗಳೊಡನೆ ಸಜ್ಜಾಗಿ ಬರಲಿಕ್ಕೆ ತಿಳಿಸಿದರು ಅಲ್ಪಾವಕಾಶದಲ್ಲಿ ಎಲ್ಲರೂ ಮಹಾದ್ವಾರದ ಕಡೆಗೆ ಸಾಗಿದರು ಇಷ್ಟರಲ್ಲಿ ಇಬ್ರಾಹಿಮಖಾನನ ಜನರು ಕಿಲ್ಲೆಯೊಳಗೆ ಸಹ ದುಮುಕಿದ್ದರು ಪರಸ್ಪರರಲ್ಲಿ ತೀಕ್ಷ್ಣ ಚಕಮಕಿಯು ಪ್ರಾರಂಭವಾಯಿತು "ಕೊಲ್ಲಿರಿ, ಹೊಡೆಯಿರಿ, ಎಲ್ಲರನ್ನು ಯಮಸದನಕ್ಕಟ್ಟಿರಿ! ಮಹಾರಾಣೀಕೀ ಜಯ್!" ಇತ್ಯಾದಿ ಶಬ್ದಗಳೇ ಕೇಳ ಬರಹತ್ತಿದ್ದವು.

ಹೀಗೆ ಯುದ್ಧವು ನಡೆದಿರಲು, ಕೆಲವು ಜನರು ಮಹಾಲಿನೊಳಗೆ ಹೋಗಿ, ಶತ್ರುಗಳ ಕಡೆಯ ಜನರು ಕಿಲ್ಲೆಯೊಳಗೆ ಸೇರಿದ ವಾರ್ತೆಯನ್ನು ರಾಣಿಗೆ ತಿಳಿಸಿದರು. ಈ ಸುದ್ದಿಯನ್ನು ಕೇಳಿದ ಕೂಡಲೆ ಕೋಮಲ ಮನಸ್ಸಿನ ಚಾಂದಕುಮಾರಿಯು ಮೋರೆಯು

ಕಪ್ಪಿಟ್ಟಿತು; ಆಕೆಯ ಉತ್ಸಾಹವು ಉಡುಗಿತು. ಮುಂದೇನು ಗತಿಯೆಂದು ಅವಳು ದಿಙ್ಮೂಢಳಾದಳು; ಆದರೆ ನಾರಾಯಣಕುಮಾರಿಯ ಸ್ಥಿತಿಯು ಮಾತ್ರ ಇದಕ್ಕೆ ವಿಪರೀತವಾಗಿದ್ದಿತು. ಕಿಲ್ಲೆಯನ್ನು ಸೇರಿದ ಜನರು ಇಂಗ್ಲಿಷರೋ ಅಥವಾ ತಾವು ಇದಿರಾದವನ ಜನರೋ ಎಂಬುದು ತಿಳಿಯದಿದ್ದರೂ, ಆ ವೀರವನಿತೆಯು ಕಿಂಚಿತ್ತಾದರೂ ಬೆದರದೆ, ತನ್ನ ಪತಿಯ ಪ್ರಿಯಖಡ್ಗಕ್ಕೆ ಭಕ್ತಿಯಿಂದ ನಮಸ್ಕರಿಸಿ, ಅದನ್ನು ಅತ್ಯುತ್ಸಾಹದಿಂದ ಸ್ವೀಕರಿಸಿ, ಕಿಲ್ಲೆಯ ಮಹಾ ದ್ವಾರದ ಕಡೆಗೆ ಧಾವಿಸಿ ಬಂದಳು. ರಾಣಿಯು ಹಕೀಮನಿರುವ ಸ್ಥಳಕ್ಕೆ ಬಂದು ಮುಟ್ಟುವ ಪೂರ್ವದಲ್ಲಿಯೇ, ಇಬ್ರಾಹಿಮಖಾನನ ಜನರ ಅವಸ್ಥೆಯು ಮುಗಿದು ಹೋಗಿತ್ತು. ಇಪ್ಪತ್ತೈದು ಮೂವತ್ತು ಜನರ ರುಂಡಗಳು ದಿಂಡದಿಂದ ಬೇರೆಯಾಗಿದ್ದವು; ಉಳಿದ ಜನರು ಘಾಯಹೊಂದಿ ಸೆರೆಯಾಳಾಗಿದ್ದರು. ಇಬ್ರಾಹಿಮ ಖಾನನು ಅತ್ಯಂತ ಘಾಯಹೊಂದಿ ನೆಲದಮೇಲೆ ಅಂಗಾತ ಬಿದ್ದಿದ್ದನು. ಅಷ್ಟರಲ್ಲಿ ನಾರಾಯಣಕುಮಾರಿಯು ಬರಲು, ಗಯಾಪ್ರಸಾದನು ಘಟಿಸಿದ ಎಲ್ಲ ಸಂಗತಿಯನ್ನು ರಾಣಿಗೆ ತಿಳುಹಿದನು. ಆಗಿಹೋದ ಸಂಗತಿಯನ್ನು ನೋಡಿ ಉದಾರಾಂತಃಕರಣೆಯಾದ ನಾರಾಯಣಕುಮಾರಿಗೆ ಕೆಡುಕೆನಿಸಿತು. ಆಕೆಯು ಮನದಲ್ಲಿಯೇ ಮರುಮರನೆ ಮರುಗಿ, ತನ್ನ ಜನರನ್ನು ಕುರಿತು:- 'ಇಷ್ಟು ಜನರ ಕೊಲೆಮಾಡುವದೇನೂ ಅವಶ್ಯಕತೆಯಿದ್ದಿದ್ದಿಲ್ಲ. ಇವರನ್ನು ಹಾಗೆಯೇ ಹೊರಗೆ ಅಟ್ಟಬೇಕಾಗಿದ್ದಿತ್ತು' ಎಂದು ನುಡಿದಳು.

ಬಳಿಕ ಇಬ್ರಾಹಿಮಖಾನನ ಜನರನ್ನು ಬಂಧಮುಕ್ತ ಮಾಡಬೇಕೆಂದು ರಾಣಿಯು ಗಯಾಪ್ರಸಾದನಿಗೆ ಆಜ್ಞಾಪಿಸಿದಳು. ಇಬ್ರಾಹಿಮಖಾನನಿಗೆ ಭಯಂಕರ ಗಾಯಗಳಾಗಿದ್ದವು; ಆದರೂ ತಕ್ಕ ಔಷಧೋಪಚಾರಗಳಾದಲ್ಲಿ ಆತನು ಬದುಕಬಹುದೆಂದು ರಾಣಿಯು ತರ್ಕಿಸಿ, ಆತನನ್ನು ಹೊತ್ತುಕೊಂಡು ಹೋಗಲಿಕ್ಕೆ ಆತನ ಸೇವಕರಿಗೆ ತಿಳಿಸಿದಳು; ಆದರೆ ತಮ್ಮ ತಮ್ಮ ಜೀವಗಳನ್ನು ಕಾಯ್ದುಕೊಳ್ಳುವದಕ್ಕೆಯೇ ಅತ್ಯಂತ ಉತ್ಸಾಹಿತರಾದ ಖಾನನ ಸೇವಕರು, ಆತನನ್ನು ತೆಗೆದುಕೊಂಡು ಹೋಗಲಿಕ್ಕೆ ಸಮ್ಮತಿಸಲೊಲ್ಲರು. ಮನೋರಾಜ್ಯದ ಅತ್ಯುಚ್ಚ ಶಿಖರದ ಮೇಲೆ ಕುಳಿತು ವಿಚಾರ ಮಾಡುತ್ತಿರುವ ಖಾನನು, ಸೀತಾಪುರಕ್ಕೆ ಬರುವ ಮುಂದೆ ಹತ್ತಿಕೊಂಡು ಬಂದ

ಆನೆಯ ಮಾವುತನು ಎಲ್ಲರಿಗಿಂತ ಮೊದಲು ಆ ಆನೆಯನ್ನು ತೆಗೆದುಕೊಂಡು ಓಡಿದ್ದನು. ಆಗ ರಾಣಿಯ ಆಜ್ಞೆಯ ಮೇರೆಗೆ ಕಲ್ಯಾಣಸಿಂಹನು ಎರಡು ಮೂರು ಚಕ್ಕಡಿಗಳನ್ನು ಹಿಡತರಿಸಿ, ಮೇಲೆ ಹಾದಿಯ ಖರ್ಚಿನ ಸಲುವಾಗಿ ನೂರಾರು ರೂಪಾಯಿಗಳನ್ನು ಕೊಟ್ಟು, ಖಾನನನ್ನು ಆತನ ಊರಿಗೆ ಮುಟ್ಟಿಸುವಂತೆ ಮಾಡಿದನು. ಇಂತು ಮನೋರಾಜ್ಯದ ಸುಖಸಾಗರದಲ್ಲಿ ಲೀಲಾಡುತ್ತ, ವೈಭವ ಮದದಿಂದ ಪರವಶನಾಗಿ ಸೀತಾಪುರವನ್ನು ಪ್ರವೇಶಿಸಿದ ಇಬ್ರಾಹಿಮಖಾನನು ಶಸ್ತ್ರಗಳ ಏಟಿಗೆ ಪಾತ್ರನಾಗಿ ಭಯಂಕರ ವೇದನೆಗಳನ್ನು ಸಹಿಸುತ್ತ ಲಕ್ನೌದ ಕಡೆಗೆ ಸಾಗಿದನು; ಆದರೆ ಕೃತಕರ್ಮಕ್ಕೆ ತಕ್ಕ ಫಲವನ್ನು ಹೊಂದಿ ದಾರಿಯಲ್ಲಿಯೇ ಮಡಿದನು!

---

## ಪಂಜರದೊಳಗಿನ ಗಿಳಿಗಳು.

ಸಿಪಾಯಿಗಳ ದಂಗೆಗಿಂತ ಮೊದಲು ಕಾನಪುರವು ದೊಡ್ಡ ಪಟ್ಟಣಗಳಲ್ಲಿ ಎಣಿಸಲ್ಪಡುತ್ತಿದ್ದಿಲ್ಲ. ಇಂಗ್ಲಿಷರು ರೋಹಿಲರ ಸಂಗಡ ಯುದ್ಧ ಮಾಡಿದಂದಿನಿಂದ ಅಂದರೆ ಸನ್ ೧೭೭೭ ರಿಂದ ಅಲ್ಲಿ ತಮ್ಮ ಸೈನ್ಯದ ಛಾವಣಿಯನ್ನು ಮಾಡಿದರು. ಅಂದಿನಿಂದ ಸರಾಸರಿ ಅದರ ಬೆಳವಣಿಗೆಯು ಶೀಘ್ರದಿಂದ ಸಾಗಹತ್ತಿತು. ಆದರೂ ಅದು ಅಷ್ಟೊಂದು ದೊಡ್ಡ ಪಟ್ಟಣಗಳಲ್ಲಿ ಎಣಿಸಲ್ಪಡುತ್ತಿದ್ದಿಲ್ಲ. ನಮ್ಮ ಕಥೆ ನಡೆದ ಕಾಲದಲ್ಲಿಯಂತೂ ಕಾನಪುರವನ್ನು ಠಕ್ಕರೂ, ದರೋಡೆಖೋರರೂ ಮುತ್ತಿ ಪೀಡಿಸುತ್ತಿದ್ದರು.

ಕಾನಪುರ ಪಟ್ಟಣದ ವಾಯವ್ಯದಲ್ಲಿ ಇಂಗ್ಲಿಷರು ವಾಸಿಸುತ್ತಿದ್ದರು. ಈ ಭಾಗದಲ್ಲಿಯ ಕೇರಿಗಳೂ, ಅಂಗಡಿ-ಮನೆಗಳೂ ಸ್ವಚ್ಛವಾಗಿಯೂ, ಅಚ್ಚುಕಟ್ಟಾಗಿಯೂ ಇದ್ದವು. ಊರಲ್ಲಿಯಾದರೂ ಎಷ್ಟೋ ಕಡೆಯಲ್ಲಿ ಶ್ರೀಮಂತಜನರ ದೊಡ್ಡ ದೊಡ್ಡ ಇಮಾರತುಗಳೂ, ರಮಣೀಯ ಉದ್ಯಾನಗಳೂ ಶೋಭಿಸುತ್ತಿದ್ದವು. ಸದ್ಯದ ಅಯೋಧ್ಯೆಯ ಸೇನಾಪತಿಯಾದ ರಾಜಾ ದರ್ಶನಸಿಂಹನ ತಂದೆಯಾದ ಜಯಪಾಲಸಿಂಹನು ಮೊದಲು ಇದೇ ಊರಲ್ಲಿರುತ್ತಿದ್ದನು. ಜಯಪಾಲಸಿಂಹನು ರಜಪೂತ ವಂಶದಲ್ಲಿ ಜನಿಸಿದ್ದರೂ,

ಕಾಲಮಾಹಾತ್ಮ್ಯಕ್ಕನುಸಾರವಾಗಿ ಆತನು ವಣಿಗ್ವೃತ್ತಿಯನ್ನು ಕೈ-ಕೊಂಡು ತಂದೆಯು ಗಳಿಸಿಟ್ಟ ವಿಪುಲ ಸಂಪತ್ತಿಯನ್ನು ಬೆಳೆಸಿದ್ದನು. ಮುಪ್ಪಿನ ಮೂಲಕ ಈಗ ನಾಲ್ಕಾರು ವರುಷಗಳಿಂದ ರಾಜಾ ಜಯಪಾಲಸಿಂಹನು ತನ್ನ ವ್ಯಾಪಾರವನ್ನು ಮುಗಿಸಿ, ಯಾವದೋ ಕಾರಣದಿಂದ ಕಾನಪುರವನ್ನು ಬಿಟ್ಟು ನಾಲ್ಕೈದು ಹರದಾರಿಯ ಮೇಲಿರುವ ಒಂದು ಹಳ್ಳಿಯಲ್ಲಿರುತ್ತಿದ್ದನು. ಕಾನಪುರದ ಯ ಪುಟ್ಟದೂ ಅಚ್ಚುಕಟ್ಟಾದದ್ದೂ ಆದ ಇಮಾರತಿಯೂ, ಸುತ್ತಲಿನ ರಮಣೀಯವಾದ ಪ್ರಶಸ್ತ ಉದ್ಯಾನವೂ ಇನ್ನೂ ವರೆಗೆ ಜಯಪಾಲಸಿಂಹನ ವಶದಲ್ಲಿಯೇ ಇದ್ದವು ಈ ಇಮಾರತಿಯಲ್ಲಿ ಪ್ರಸ್ತುತದಲ್ಲಿ ಓರ್ವವೃದ್ಧ ಸ್ತ್ರೀಯು ಇರುತ್ತಿದ್ದು, ರಾಜಾ ದರ್ಶನಸಿಂಹನು ಆಕೆಗೆ 'ಅವ್ವ'ನೆಂದು ಅನ್ನುತ್ತಿದ್ದನು. ಅವಳಾದರೂ ಆತನ ಮೇಲೆ ಪುತ್ರವತ್ ಪ್ರೀತಿಯನ್ನು ಮಾಡುತ್ತಿದ್ದಳು

ಆ ಮಾರತದ ನಾಲ್ಕುದಿಕ್ಕಿನ ಸುತ್ತಲ್ಲಿರುವ ಉದ್ಯಾನದ ಮಧ್ಯದಲ್ಲಿ ಜಯಪಾಲಸಿಂಹನ ಮೇಲುಪ್ಪರಿಗೆಯ ಮನೆಯಿತ್ತು. ಎರಡನೆಯ ಅಂತಸ್ತಿನಲ್ಲಿ ಮೂರು-ನಾಲ್ಕು ಕೋಣೆಗಳಿದ್ದು, ನಡುವೆ ಭವ್ಯವಾದ ದಿವಾಣಖಾನೆಯಿತ್ತು. ಮೊದಲಿನ ಅಂತಸ್ತಿನಲ್ಲಿಯ ಒಂದು ಕೋಣೆಯಲ್ಲಿ ಎರಡು-ಮೂರು ಕುದುರೆಗಳನ್ನು ಕಟ್ಟಿದ್ದು, ಎರಡು ಖೋಲಿಗಳಲ್ಲಿ ಸೇವಕ ಜನರು ಇರುತ್ತಿದ್ದರು. ಮೇಲೆ ಹೇಳಿದ ವೃದ್ಧ ಸ್ತ್ರೀಯ ಸಹಾಯಕ್ಕೆಂದು ಒಂದು ಯಾ ಎಂಬ ಒಕ್ಕಲಗಿತ್ತಿಯೊಬ್ಬಳಿದ್ದಳು ಅವಳಿಗೆ ಎಲ್ಲರೂ ದಾಯಿಯೆಂದು ಕರೆಯುತ್ತಿದ್ದರು

ಒಂದು ದಿವಸ ಮಧ್ಯಾಹ್ನದ ಸಮಯವು ಸೂರ್ಯನ ತಾಪವನ್ನು ತಡೆಯದೆ, ಭೂಮಾತೆಯು ಉಸ್ಸೆಂದು ಉಸಿರ್ಗರೆಯುತ್ತ ಕುಳಿತುಕೊಂಡಿದ್ದಾಳೆ. ಭಾಸ್ಕರನ ಮುಂದೆ ತನ್ನ ಆಟವು ಸಾಗದೆಂದು ವಾಯುವು ಎತ್ತಲೋ ಅಡಗಿಬಿಟ್ಟಿದ್ದಾನೆ. ಎಲ್ಲ ಜನರು ತಮ್ಮ ತಮ್ಮ ಊಟ-ಉಪಚಾರಗಳಲ್ಲಿ ತೊಡಗಿದ್ದರಿಂದ ಜನರ ಗದ್ದಲವು ಕಡಿಮೆಯಾಗಿದೆ. ಜಯಪಾಲನಸಿಂಹನ ಮನೆಯಲ್ಲಿರುವ ವೃದ್ಧೆಯು ಅದೇ ಊಟವನ್ನು ತೀರಿಸಿಕೊಂಡು ದಿವಾಣಖಾನೆಯಲ್ಲಿ ಒಂದು ಸುತ್ತಲಿನ ಕಸ್ಸಡಿಯ ಕಿಟಕಿಯೊಳಗಿಂದ ಸೃಷ್ಟಿಸೌಂದರ್ಯವನ್ನು ನೋಡತೊಡಗಿದ್ದಾಳೆ. ಆಗ ಅವಳು ದೂರದಲ್ಲಿ ಕೆಲವು ಜನರು ಬರುವದನ್ನು

ಕಂಡಳು. ಆ ಜನಸಮೂಹವು ಸಮೀಪಕ್ಕೆ ಬಂದಬಂದಂತೆ ಅವರು ದರ್ಶನಸಿಂಹನಿಂದ ಕಳುಹಲ್ಪಟ್ಟ ಜನರೇ ಇರಬಹುದೆಂಬ ಅವಳ ಕಲ್ಪನೆಯು ದೃಢವಾಗುತ್ತ ಸಾಗಿತು ಆಗ ಅವಳು ಲಗಬಗೆಯಿಂದ ಬಂದಿಯಾ ದಾಸಿಯನ್ನುದ್ದೇಶಿಸಿ: "ದಾಯಿ, ನೋಡು ಅತ್ತ ನೋಡು. ಆನೆ-ಕುದುರೆ-ಪಲ್ಲಕ್ಕಿಗಳನ್ನು ತೆಗೆದುಕೊಂಡು ಇತ್ತ ಕಡೆಗೆ ಯಾರು ಬರುತ್ತಿರಬಹುದು? ಬಹಳ ಮಾಡಿ ದರ್ಶನನೇ ಈ ಜನರನ್ನು ಕಳಿಸಿರುವನೆಂಬಂತೆ ತೋರುತ್ತದೆ ನಮ್ಮನ್ನು ಲಖನೌಕ್ಕೆ ಕರಕೊಂಡು ಹೋಗುವದರ ಸಲುವಾಗಿ ಬಹುಶಃ ಬಂದಿರಬಹುದು."

ವೃದ್ಧಸ್ತ್ರೀಯು ಆಜ್ಞೆಯಂತೆ ದಾಸಿಯು ಅವರು ಯಾರೆಂಬದನ್ನು ಅರಿತುಕೊಳ್ಳುವ ಕುತೂಹಲದಿಂದ ಕೆಳಗೆ ಬಂದಳು. ಅಷ್ಟರಲ್ಲಿ ಬಂದ ಜನರಲ್ಲಿಯ ಪ್ರಮುಖನು ಮುಂದೆ ಬಂದು:— "ನಾವು ಲಖನೌದಿಂದ ರಾಜಾ ದರ್ಶನಸಿಂಹನ ಅಪ್ಪಣೆಯ ಮೇರೆಗೆ ಬಂದಿರುತ್ತೇವೆ. ನನ್ನ ಹೆಸರು ಸಾಧುಸಿಂಹ. ಅಮ್ಮನವರಿಗೆ ಸುದ್ದಿಯನ್ನು ತಿಳಿಸಿರಿ"

ದಾಸಿಯು ಕೆಳಗೆ ವರ್ತಿಸಿದ ಎಲ್ಲ ಸಂಗತಿಯನ್ನು ಮೇಲೆ ಬಂದು ಹೇಳಿದಳು ಆ ವೃದ್ಧ ಸ್ತ್ರೀಗೆ ದರ್ಶನಸಿಂಹನ ವಿಶ್ವಾಸದ ಸೇವಕನಾದ ಸಾಧುಸಿಂಹನು ಹೊಸಬನಿರದೆ, ಪೂರ್ಣ ಪರಿಚಯದವನಿದ್ದನು ಅವನು ಬಂದ ಕಾರಣವೂ ಅವಳಿಗೆ ಹೊಳೆಯದೆ ಇರಲಿಲ್ಲ. ಇರಲಿ. ವಾಚಕರೇ, ಮೇಲಿನ ಈ ದಿವಾಣಖಾನೆಯಲ್ಲಿ ಆ ಇಬ್ಬರು ಸ್ತ್ರೀಯರ ಹೊರತು ಮತ್ತಿಬ್ಬರು ಸ್ತ್ರೀಯರಿದ್ದರು. ಅವರಲ್ಲಿ ಒಬ್ಬಳು ಸರಾಸರಿ ಹದಿನಾಲ್ಕು-ಹದಿನೈದು ವರುಷದವಳೂ, ಮತ್ತೊಬ್ಬಳು ಹದಿನೆಂಟರ ಒಳಹೊರಗಿನವಳೂ ಇರಬಹುದು. ಚಿಕ್ಕ ತರುಣಿಯು ಇದೇ ಈಗ ಮದನ ಸಾಮ್ರಾಜ್ಯವನ್ನು ಪ್ರವೇಶಿಸ ಹತ್ತಿದ್ದಳು. ಅವಳ ವಿಶಾಲವಾದ ಕಣ್ಣೊಳಗಿನ ಕರೇಗುಡ್ಡೆಗಳು ನೀಲಕಮಲವನ್ನು ನೆನಪು ಮಾಡಿಕೊಡುತ್ತಿದ್ದವು. ಅವಳ ಹಣೆಯು ವಿಶಾಲವಿದ್ದು, ಕಪ್ಪಾದ ಮುಂಗುರಗೂದಲುಗಳು ಶೋಭಿಸುತ್ತಿದ್ದವು ರೆಪ್ಪೆಗಳ ಮರೆಗೆ ನಿಂತ ಮನ್ಮಥನು ಹುಬ್ಬುಗಳೆಂಬ ಕಬ್ಬಿಗಿನ ಧನುಷ್ಯವನ್ನು ಜಗ್ಗಿ ಜಗ್ಗಿ, ತನ್ನ ಬಾಣವನ್ನು ಎಸೆಯಲಿಕ್ಕೆ ಪ್ರಾರಂಭಿಸಿದ್ದನು. ಅವಳ ನೆಟ್ಟನ್ನ ಮೂಗೂ, ಕೊನೆಯ ಹುಬ್ಬೂ

ಸೂಕ್ಷ್ಮಗುಲಾಬಿಯ ಹೂವನ್ನು ನಾಚಿಸುತ್ತಿರುವಂಥ ಕಪೋಲಗಳೂ ತೊಂಡೆಯ ಹಣ್ಣಿನ ಕಾಂತಿಯನ್ನು ಅಲ್ಲಗಳೆವ ತುಟಿಗಳೂ ನಯನ ಮನೋಹರವಾಗಿ ತೋರುತ್ತಿದ್ದವು ಕುಚಪ್ರದೇಶವು ಒಡೆದು ಕಾಣುವಷ್ಟು ಹತ್ತಿ ಬಂದಿದ್ದರೂ, ಸೂಕ್ಷ್ಮರೀತಿಯಿಂದ ನೋಡುವವರ ಚಿತ್ತಹರಣ ಮಾಡದೆ ಬಿಡುತ್ತಿದ್ದಿಲ್ಲ ಕಟಿಪ್ರದೇಶವು ಸೂಕ್ಷ್ಮವಿದ್ದು, ನಿತಂಬಗಳು ಈಗೀಗ ತುಂಬತೊಡಗಿದ್ದವು ಒಂದು ಸೂಕ್ಷ್ಮ ಶುಭ್ರವಸ್ತ್ರವನ್ನು ಉಟ್ಟಿದ್ದ ಅವಳ ಮಾಟವಾದ ಪಾದಗಳು ನೋಟಕ್ಕೆ ಸೊಗಸಾಗಿದ್ದವು ಆರಿಸಿ ತೆಗೆದ ಸಾವಿರಾರು ಜನ ಸುಂದರಿಯರಲ್ಲಿ ಅವಳು ಒಡೆದು ಕಾಣುತ್ತಿದ್ದಳೆಂದು ಹೇಳಿದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ ಇರಲಿ ಆ ಎರಡನೆಯ ತರುಣಿಯು ಹಲಕೆಲವು ಕಾರಣಗಳ ಮೂಲಕ ತನ್ನ ಸೌಂದರ್ಯವನ್ನು ಕಳಕೊಂಡಿದ್ದಳು. ಅತ್ಯಂತ ಚಿಂತೆಯಿಂದಲೂ, ರೋಗದಿಂದಲೂ ಅವಳು ತೀರಾ ಕ್ಷೀಣಳೂ, ನಿಸ್ತೇಜಳೂ ಆಗಿದ್ದಳು. ಒಳ್ಳೇ ತರುಣ ವಯಸ್ಸಿದ್ದರೂ ಗಲ್ಲಗಳು ಒಳಹೊಕ್ಕಿದ್ದವು. ಕಣ್ಣು ಒಳಸೇರಿದ್ದವು ಮೊದಲಿನ ಗುಲಾಬಿಯ ತೇಜಃಪುಂಜ ಮೈಕಾಂತಿಯು ಅಡಗಿ, ಮೈಯೆಲ್ಲ ಬೆಳ್ಳಗೆ ಬೆಳ್ಳಕ್ಕಿಯಂತಾಗಿತ್ತು. ಕುತ್ತಿಗೆಯು ಮಾತ್ರ ಜಗ್ಗಿ ಹಿಂದಿನಂತೆ ಇಷ್ಟುದ್ದ ಕಾಣುತ್ತಿತ್ತು ಪಾಪ! ಆ ತರುಣಿಯ ಮೈಯಲ್ಲಿ ಎಲವು-ತೊಗಲಿನ ಹೊರತು ಮತ್ತೇನೂ ಇದ್ದಿದ್ದಿಲ್ಲವೆಂದು ಹೇಳಬಹುದು

ಸಾಧುಸಿಂಹನ ಹೆಸರನ್ನು ದಾಸಿಯ ಮುಖದಿಂದ ಕೇಳಿದ ಕೂಡಲೆ ಮುದುಕಿಯು ಕೆಳಗೆ ಇಳಿದಳು. ಸಾಧು-ಸಿಂಹನು ನಮಸ್ಕರಿಸಲು, ಆಶೀರ್ವಾದ ಮಾಡಿ ಮುದುಕಿಯು: "ದರ್ಶನನು ಕ್ಷೇಮದಿಂದಿರುವನೇ?" ಎಂದು ಕೇಳಿದಳು.

"ಅವ್ವನವರೇ, ಅವರು ಕ್ಷೇಮದಿಂದಿರುವರು. ಆದರೆ ತುಸ ದಿವಸಗಳಲ್ಲಿ ಒಂದು ದೊಡ್ಡ ಸಂಕಟ'........" ಮುದುಕಿಯು ಅಧೀರತೆಯಿಂದ ನಡುವೇ ಬಾಯಿ ಹಾಕಿ:—"ಆ, ಏನಾಯಿತು?"

"ಅಂಥ ವಿಶೇಷವೇನೂ ಇಲ್ಲ. ನಾಲ್ಕಾರು ದಿವಸಗಳೊಳಗೆ ಈ ಇಬ್ಬರು ಹುಡಿಗಿಯರನ್ನು ಲಖನೌಕ್ಕೆ ತೆಗೆದುಕೊಂಡು ಹೋಗಲಿಕ್ಕೆ ಬೇಕು. ಬಾದಶಹನ ಒತ್ತಾಯದ ಹುಕುಮು ಆಗಿದೆ"

"ಚಂಪೆಯನ್ನು ಕಳಿಸಲಿಕ್ಕೆ ನಾನು ಹಿಂದೇಕಾಲ ಮೇಲೆ ಸಿದ್ಧ

ಳಿದ್ದೇನೆ. ಆಕೆಯು ಗಾನ-ನರ್ತನಗಳನ್ನು ಚನ್ನಾಗಿ ಕಲಿತುಕೊಂಡಿದ್ದಾಳೆ; ಆದರೆ ಈ ಎರಡನೆಯ ಹುಡಿಗೆಯ ಸಲುವಾಗಿ ಮಾತ್ರ ನನಗೆ ಹಿಂದೇಸವನೆ ಚಿಂತೆಯಾಗುತ್ತಿರುತ್ತದೆ!''

''ಮಹಾರಾಜರಂತೂ ಆ ಇಬ್ಬರು ಹುಡಿಗೆಯರನ್ನು ಕರಕೊಂಡು ಬರಬೇಕೆಂದು ಹೇಳಿದ್ದಾರೆ''

''ಆದರೆ, ಹಾದಿಯಲ್ಲಿ ಈ ಚಟ್ಟ ಹುಡಿಗೆಯು ಚೀರಾಟ, ಒದರಾಟಗಳನ್ನು ಮಾಡಿದರೆ ಹೇಗೆ!''

''ಈ ಹುಡಿಗೆಗೆ ಹುಚ್ಚು ಹಿಡಿದಿರುವದರಿಂದ ಅದು ಚೀರಾಡುತ್ತದೆಂದು ಮಾರ್ಗಸ್ಥರಿಗೆ ಹೇಳಲಿಕ್ಕೆ ಬಂದೀತು. ಅದೇನು ದೊಡ್ಡ ಮಾತು?''

''ಆದರೆ ಈಕೆಯನ್ನು ಲಖನೌಕ್ಕೆ ತೆಗೆದುಕೊಂಡು ಹೋಗಿ ಮಾಡುವದಾದರೂ ಏನು? ಖೋಡಿ, ಹಾಡಲಿಕ್ಕೂ ಬಾರಿಸಲಿಕ್ಕೂ ಕಲಿತೇ ಇಲ್ಲ!'

''ಅದಯು ಈ ಎರಡು ವರ್ಷಗಳಲ್ಲಿ ಏನೂ ಕಲಿತಿಲ್ಲವೋ?''

''ಮೇಲಿಂದ ಮೇಲೆ ಈ ಖೋಡಿ ಹುಡಿಗೆಯು ಆತ್ಮಹತ್ಯೆಯನ್ನು ಮಾಡಿಕೊಳ್ಳುವದರ ಸಲುವಾಗಿ ಧಡಪಡಿಸುತ್ತಿದ್ದದರಿಂದ, ಸುಮಾರು ಒಂದು ವರುಷದ ವರೆಗೆ ಈಕೆಯನ್ನು ಬಂದಿ ದಿವಸದಲ್ಲಿಯೇ ಇಡಬೇಕಾಯಿತು. ಆದರೂ ಎಲ್ಲಿ ಕಣ್ಣು ತಪ್ಪಿಸಿ ಜೀವವನ್ನು ಕೊಡುವಳೋ ಎಂಬ ಅಂಜಿಕೆಯು ಇದ್ದೇ ಇತ್ತು! ಮುಂದೆ ಐದಾರು ತಿಂಗಳುಗಳ ವರೆಗೆ ಭಯಂಕರ ಜಡ್ಡಾಗಿ, ಅದರಲ್ಲಿ ಜೀವ ಹೋಗಿ ಜೀವ ಬಂತು! ಆ ಮೇಲೆ ತುಸ ಗುಣವಾದರೂ ನಮ್ಮ ಗಾಳಿಗೂ ನಿಂದರಲೊಲ್ಲಳು. ನಮ್ಮ ಸಂಗಡ ನೆಟ್ಟಗೆ ಮಾತಿಲ್ಲ, ಕಥೆಯಿಲ್ಲ ಏನಾದರೂ ಹೇಳುವಂತಿಲ್ಲ-ಕೇಳುವಂತಿಲ್ಲ ನಾವೇನಾದರೂ ಕೊಟ್ಟರೆ ತಿನ್ನುವಂತಿಲ್ಲ; ಬಹಳೇಕೆ? ನಾವು ಹಿಡಿದ ನೀರನ್ನು ಸಹ ಮುಟ್ಟುವಂತಿಲ್ಲ! ನನ್ನನ್ನು ನೋಡಿದ ಕೂಡಲೆ ಸಿಟ್ಟಿಗೆದ್ದ ನಾಗಿಣಿಯಂತೆ ಹಿಂದೇಸವನೆ ಬುಸ್ಸಲಾರಂಭಿಸುತ್ತಾಳೆ. ಇಂಥ ಖೋಡಿಗೆ ಏನು ಕಲಿಸಬೇಕು?''

''ಇನ್ನೂ ಹೀಗೆಯೇ ತ್ರಾಸ ಕೊಡುತ್ತಿರುವಳೇ?''

''ಇಲ್ಲ. ಈಗೀಗ ತುಸ ತ್ರಾಸವು ಕಡಿಮೆಯಾಗಿದೆ. ಆದರೂ

ಈ ಹುಡಿಗೆಯ ಮೂಲಕ ನನಗೆ ಮಾತ್ರ ಸಾಕು ಸಾಕಾಗಿ ಹೋಯಿತು! ದೇವರ ಮೇಲಿನ ಹೂವು ಹಿಂದಿಲ್ಲೊಂದು ದಿನ ತಪ್ಪಬಹುದು; ಆದರೆ ಈಕೆಯು ನನ್ನ ಮೇಲಿನ ಪುಷ್ಪವೃಷ್ಟಿಯನ್ನು ತಪ್ಪಿಸುವದಿಲ್ಲ! ಪ್ರತಿದಿವಸ ಜಗಳಾಟವು ನಡೆದೇ ಇದೆ. ನನ್ನನ್ನು ನೋಡಿದ ಕೂಡಲೆ ಈದ ಹುಲಿಯಂತೆ ಕೆಂಪುಗಣ್ಣು ಮಾಡಿ ಹರಕೊಂಡು ತಿನ್ನುವಳೋ ಏನೋ ಎಂಬಂತೆ ಮಾಡುತ್ತಾಳೆ. ಇಂಥ ರಕ್ಕಸಿಯಾದ ಚಂಡಿ ಹುಡಿಗಿಯನ್ನು ದರ್ಶನವು ನನ್ನ ಹತ್ತರ ಏತಕ್ಕೆ ಕಳಿಸಿದನೋ ಯಾರು ಬಲ್ಲರು!''

ಇಂತು ಸಾಧುಸಿಂಹನು ನೆಲಮಾಳಿಗೆಯ ಸಂದಿ ಕೆಳಗೆ ಮಾತಾಡುತ್ತಿರುವ ಸಮಯದಲ್ಲಿ, ಮೇಲ್ಮಾಳಿಗೆಯ ಮೇಲೆ ಇದ್ದ ಇಬ್ಬರು ತರುಣ ಸ್ತ್ರೀಯರು ಮನಬಿಚ್ಚಿ ಪರಸ್ಪರರಲ್ಲಿ ಮಾತಾಡುತ್ತಿದ್ದರು. ಅವರಲ್ಲಿ ಬೇನೆಯಿಂದ ಬೆಂದು ಬೆಂಡಾಗಿ ಬಿಳೇ ಹಲ್ಲಿಯಂತೆ ಆಗಿದ್ದ ಸ್ತ್ರೀಯು: "ಚಂಪೇ! ನನ್ನಿಂದ ಇನ್ನು ಮೇಲೆ ಮಾತ್ರ ಈ ಭಯಂಕರ ಯಾತನೆಯನ್ನು ಸಹಿಸಲಾಗದು! ನಾನು ಇಲ್ಲಿಯ ವರೆಗೆ ಸಾಯಬೇಕೆಂದು ಬಗೆ ಬಗೆಯಾಗಿ ಪ್ರಯತ್ನಿಸಿದರೂ ನನ್ನ ಪ್ರಯತ್ನವು ಕೈಗೂಡದ್ದನ್ನು ನೋಡಿದರೆ, ನನ್ನನ್ನು ಸ್ಪರ್ಶಿಸಲು ಆ ಶಂಕರನೂ ಕೂಡ ಹೇಸುವನೋ ಏನೋ!'' ಎಂಬ ಕಂಬನಿಗಳನ್ನು ಸುರಿಸಹತ್ತಿದಳು.

ಚಂಪೆ:—"ನೀನು ಹೀಗೆ ಅಳಬೇಡವ್ವಾ, ನೀನು ಅಳಹತ್ತಿದ ಕೂಡಲೆ ನನಗೆ ಹ್ಯಾಗೆ ಹ್ಯಾಗೋ ಅನ್ನಿಸಿ, ನನಗೆ ದುಃಖವಾಗುತ್ತದೆ''

"ಚಪಲಾ:—ಇಲ್ಲಿಗೆ ನನ್ನನ್ನು ಯಾರು-ಯಾತಕ್ಕೆ-ತಂದಿದ್ದಾರೆ? ಇಷ್ಟು ಬಂದಿಯಲ್ಲಿರಿಸಿರುವ ಕಾರಣವಾದರೂ ಏನು? ನಿನಗೆ ಏನಾದರೂ ಗೊತ್ತಿರುವದೋ?''

"ಸಖೀ, ನನಗೆ ಅದೆಲ್ಲ ಗೊತ್ತಿದೆ; ಆದರೆ ನೀನು ಹೀಗೆ ಹಗಲಿರುಳು ಅಳುವದನ್ನು ಮಾತ್ರ ನಾನು ನೋಡಲಾರೆನು! ಈ ಎರಡು ವರುಷಗಳಿಂದ ನಿನ್ನ ಸಂಗಡ ಮನಬಿಚ್ಚಿ ಒಂದೆರಡು ಮಾತಾಡಬೇಕೆಂದರೆ, ಅಂಥ ಯೋಗಾಯೋಗವೇ ಕೂಡಿ ಬರದಾಗಿದೆ''

"ಹಾಗಾದರೆ ಈಗ ಹೇಳು ನೋಡೋಣ; ನನ್ನನ್ನು ಇಲ್ಲಿ ಯಾರು ತಂದರು? ಯಾತರ ಸಲುವಾಗಿ ತಂದರು? ನಿಮ್ಮವ್ವನು

ಹಾಡು-ಬಾರಿಸಲಿಕ್ಕೆ ಕಲಿಯೆಂದು ನನ್ನ ಸುತ್ತು ದುಂಬಾಲಗೊಂಡ ಕಾರಣವೇನು?''

"ತಾಯಿ!, ನಿನ್ನನ್ನು ರಾಜಾದರ್ಶನಸಿಂಹನ ಜನರು ಹಿಡತಂದಿದ್ದಾರೆ. ಅಯೋಧ್ಯೆಯ ಬಾದಶಹನ ರಂಗ........''

ಚಂಪೆಯ ಮುಖದಿಂದ ಈ ಮಾತುಗಳನ್ನು ಕೇಳಿದ ಕೂಡಲೆ ಸಿಟ್ಟಿಗೆದ್ದ ನಾಗಿಣಿಯಂತೆ ಆವೇಶಗೊಂಡ ಆ ರೋಗಿಷ್ಠ ಸ್ತ್ರೀಯು:- "ಹಾ, ತಿಳಿಯಿತು! ಆ ದುಷ್ಟನೂ, ಕುಲಕಂಟಕನೂ, ಅಧಮಾಧಮನೂ, ಪಾಪದ ಮೂರ್ತಿಯೂ ಆದ ದರ್ಶನಸಿಂಹನ ಹೆಸರನ್ನು ನಾನು ಪೂರ್ವದಲ್ಲಿ ಹಲ-ಕೆಲವರ ಬಾಯಿಂದ ಕೇಳಿದ್ದೆನು.'' ಹೀಗೆ ಮಾತಾಡುತ್ತಿರುವಾಗ ಆ ದುರ್ಬಲ ಸ್ತ್ರೀಯ ಮುಖವು ಕೆಂಪಡರಿತು; ಸರ್ವಾಂಗವು ನಡಗಹತ್ತಿತು; ದೇಹಸ್ಮೃತಿಯು ತಪ್ಪಿತು. ಮಾತಮಾತಾಡುತ್ತಲೇ ಅವಳಿಗೆ ಮೂರ್ಛೆಯು ಬಂದಿತು

ಹೀಗೆ ಕೃಷ್ಣ ಕಾರಸ್ಥಾನಿಯಾದ ದರ್ಶನಸಿಂಹನ ಹೆಸರನ್ನು ಕೇಳಿದ ಕೂಡಲೆ, ಸಂತಾಪಾತಿರೇಕದಿಂದ ಮೂರ್ಛೆಹೋದ ರೋಗಿಷ್ಠ ಸ್ತ್ರೀಯು ಯಾರಿರಬಹುದೆಂಬದನ್ನು ನಮ್ಮ ಸೂಜ್ಞವಾಚಕರು ತರ್ಕಿಸಬಹುದು. ವಾಚಕರೇ, ಅವಳೀನೂ ನಿಮಗೆ ಹೊಸಬಳಲ್ಲ; ಗಂಗಾಪ್ರಸಾದನ ಅಕ್ಕರದ ಚಿಕ್ಕ ಮಗಳೂ, ಅಯೋಧ್ಯಾನಾಥನ ಪ್ರಿಯತಮೆಯೂ ಆದ ಮಾನಕುಮಾರಿಯೇ ಇವಳು. ಇರಲಿ.

ಚಂಪೆಯು ಮೂರ್ಛೆಹೋದ ಮಾನಕುಮಾರಿಗೆ ತಕ್ಕ ಶೀತೋಪಚಾರಗಳನ್ನು ಮಾಡಿದ ಬಳಿಕ, ಅವಳು ಮೂರ್ಛೆ ತಿಳಿದೆದ್ದು ಅನ್ನುತ್ತಾಳೆ:—"ಈಗ ನನಗೆ ಈ ದುಷ್ಟನ ಜಾಲವು ತಿಳಿದಂತಾಯಿತು. ಬಾದಶಹನ ಝನಾನಖಾನೆಯಲ್ಲಿ ಕಳಿಸುವದಕ್ಕೋಸ್ಕರ ನನ್ನನ್ನು ಹಿಡತರಿಸಿದ್ದನಲ್ಲವೆ? ಎಲಾ ಚಾಂಡಾಲಾ! ನಿನ್ನ ಕುಲಕ್ಷಯವಾಗಲಿ! ರೋಮ ರೋಮಗಳಲ್ಲಿ ಹುಳಬಿದ್ದು. ಅತ್ಯಂತ ಹಾಲಾಹಲದಿಂದ ನಿನಗೆ ಮರಣವು ಬರಲಿ!''

"ಈ ಬಗ್ಗೆ ನಿನಗೆ ಎಷ್ಟೋ ಹೇಳುವದಿದೆ'' ಚಂಪೆಯು ಅನ್ನುತ್ತಾಳೆ: "ಎಷ್ಟೋ ದಿವಸಗಳಿಂದ ನಾನು ಇಂಥ ಸಂಧಿಯು ಎಂದು ಒದಗುವದೋ ಎಂದು ಕಣ್ಣಲ್ಲಿ ಎಣ್ಣೆಯನ್ನು ಹಾಕಿಕೊಂಡು ಕುಳಿತಿದ್ದರೂ, ಇಂದಿನ ವರೆಗೆ ಸಾಧಿಸಿದ್ದಿಲ್ಲ!''

ಚಂಪೆಯ ಈ ಮಾತುಗಳನ್ನು ಕೇಳಿ ಅವಳು ಮತ್ತಷ್ಟು ಸಂತಾಪಗೊಂಡಳು. ವೈರಿಯು ನಗುಗೆಲಾರಂಭಿಸಿತು. ಅವಳು ಆವೇಶದಿಂದ:—"ಏನು? ನೀನು ನನಗೆ ಹೇಳತಕ್ಕವಳಿದ್ದೀಯಾ? ನಿನ್ನ ಮಾತು ಕೇಳುವದೇ ನನ್ನ ಮನಸ್ಸಿನಲ್ಲಿ ಇಲ್ಲ! ಆ ಬಾದಶಹನ ಝನಾನಖಾನೆಯಲ್ಲಿ ಹೋಗುವದರ ಸಲುವಾಗಿ ನನ್ನ ಮನಸ್ಸನ್ನು ನೀನು ತಿರುಗಿಸತಕ್ಕವಳೋ?—ಈ ದೇಹದಲ್ಲಿ ಪ್ರಾಣವಿರುವ ವರೆಗೆ ನಿನ್ನಂಥ ನೂರಾರು ಮಂದಿ ಚಂಪೆಯರು ಕೂಡಿ ಹೇಳಿದರೂ, ಆ ಘೋರ ದುಷ್ಕರ್ಮವು ನನ್ನ ಕೈಯಿಂದ ಆಗಲಾರದು!—ದುಷ್ಟೇ, ಸರಿ ದೂರ! ನನ್ನನ್ನು ಮುಟ್ಟಬೇಡ! ಹೋಗು, ನಿಮ್ಮ ಅವ್ವನ ಹತ್ತರ ಪಾಪಿಷ್ಠಳೇ, ನಿನಗೆ ಧಿಃಕಾರವು! ಧಿಃಕಾರವು!!"

ಗೆಳತಿಯ ಈ ತಿರಸ್ಕಾರ ಪೂರ್ಣ ಸಿಟ್ಟಿನ ಮಾತುಗಳನ್ನು ಕೇಳಿದ ಕೂಡಲೆ ಚಂಪೆಯ ಕಣ್ಣುಗಳು ನೀರಿನಿಂದ ತುಂಬಿ, ಕಂಬನಿಗಳು ಪಟ-ಪಟನೆ ಬೀಳತೊಡಗಿದವು; ಕಂಠವು ಬಿಗಿಯಿತು. ಆಗ ಅವಳು ಗದ್ಗದಸ್ವರದಿಂದ:—"ಅಕ್ಕಾ, ನೀನೂ ನನ್ನ ಮೇಲೆ ಸಿಟ್ಟಿಗೆದ್ದ ಮೇಲೆ ಈ ಅನಾಥೆಯನ್ನು ಕೇಳುವವರಾರು? ನಾನು ಯಾರ ಮೋರೆಯ ಕಡೆಗೆ ನೋಡಲಿ? ನನ್ನ ಪ್ರೇಮದ ಮಾತುಗಳನ್ನು ಕೇಳುವವರು ಇಲ್ಲಿಯ ವರೆಗೆ ಈ ಜಗತ್ತಿನಲ್ಲಿ ನಿನ್ನ ಹೊರತು ಇನ್ನೊಬ್ಬರಿಲ್ಲ! ನಿನ್ನ ಸಂಗಡ ಮನಬಿಚ್ಚಿ ನಾಲ್ಕಾರು ಮಾತುಗಳನ್ನಾಡಿ ಈ ವ್ಯಥಿತಾಂತಃಕರಣವನ್ನು ಶಾಂತಗೊಳಿಸಿಕೊಳ್ಳಬೇಕೆಂದು ಮಾಡಿದ್ದೆನು; ಆದರೆ ನೀನೂ ಸಹ ನನ್ನನ್ನು ತಿರಸ್ಕರಿಸುವದನ್ನು ನೋಡಿದರೆ, ಈ ಜಗತ್ತಿನಲ್ಲಿ ನನ್ನಂಥ ಹತಭಾಗಿನಿ-ಅನಾಥೆ-ಯು ನಾನೇ ಸರಿ!" ಎಂದು ಕಣ್ಣೀರುದರಿಸಹತ್ತಿದಳು.

ಚಂಪೆಯಾಡಿದ ಮಾತುಗಳನ್ನು ಕೇಳಿದ ಕೂಡಲೆ ಮಾನಕುಮಾರಿಯು ಆಶ್ಚರ್ಯಚಕಿತಳಾದಳು. ಚಂಪೆಯಾಡಿದ ಮಾತಿನ ಅರ್ಥವೇ ಆಕೆಗೆ ಮೊದಮೊದಲು ಹೊಳೆಯಲಿಲ್ಲ. ಆಗ ಅವಳು ಚಕಿತಮುದ್ರೆಯಿಂದ:—"ಏನು? ನಿನಗೆ ಯಾರೂ ಇಲ್ಲವೆ? ಈ ಮುದಕಿಯು ನಿನಗೆ ತಾಯಿಯಲ್ಲವೆ?"

"ನನ್ನ ತಂದೆ-ತಾಯಿಗಳು ಯಾರು ಮತ್ತು ಅವರು ಎಲ್ಲಿ ಇರುವರು ಇದು ಯಾವದೂ ನನಗೆ ಗೊತ್ತಿಲ್ಲ!"

"ಅಂದಮೇಲೆ, ನಿನ್ನನ್ನಾದರೂ ನನ್ನಂತೆಯೇ ಹಿಡತಂದಿರುವರೋ ಹೇಗೆ?

"ಇಲ್ಲ-ಇಲ್ಲ. ನನ್ನನ್ನು ಯಾರೂ ಹಿಡಕೊಂಡು ಬಂದಿಲ್ಲ. ರಾಜಾ ದರ್ಶನಸಿಂಹನ ತಂದೆಯು ನಾನು ನಾಲ್ಕೈದು ವರುಷದವಳಿರುವಾಗ ನನ್ನನ್ನು ತೆಗೆದುಕೊಂಡು ಬಂದು ಇಲ್ಲಿ ಇಟ್ಟಿರುವನು"

"ನಿನ್ನನ್ನು ಇಲ್ಲಿಗೆ ಯಾತರ ಸಲುವಾಗಿ ತಂದರು?"

"ಏನೋ, ಹಿಮ್ಮೆ ಠಕ್ಕರು ನನ್ನ ತಂದೆ-ತಾಯಿಗಳನ್ನೂ, ಅಣ್ಣ-ತಮ್ಮಂದಿರನ್ನೂ ಕೊಂದು ನನ್ನನ್ನು ತೆಗೆದುಕೊಂಡು ಓಡಿ ಹೋಗುತ್ತಿದ್ದರಂತೆ. ಅಷ್ಟರಲ್ಲಿ ದೈವಯೋಗದಿಂದ ಹಿಬ್ಬ ಸಾಹೇಬನಿಗೆ ಠಕ್ಕರ ಸುಳುವು ಗೊತ್ತಾಗಿ ಅವನು ಅವರನ್ನು ಬೆನ್ನಟ್ಟಲು, ನನ್ನನ್ನು ಅಡವಿಯಲ್ಲಿ ಚಲ್ಲಿಕೊಟ್ಟು, ಅವರೆಲ್ಲ ಮೋಸಗಾರರು ಓಡಿ ಹೋದರಂತೆ! ಮುಂದೆ ಆ ಸಾಹೇಬನ ಕಡೆಯಿಂದ ದರ್ಶನಸಿಂಹನ ತಂದೆಯು ನನ್ನನ್ನು ಇಸಗೊಂಡು ಬಂದು, ಜೋಪಾನ ಮಾಡಲಾರಂಭಿಸಿದನಂತೆ ಅಂದಿನಿಂದ ನಾನು ಇಲ್ಲಿಯೇ ಇರುತ್ತೇನೆ."

ಚಂಪೆಯ ಸಂಗತಿಯನ್ನು ಕೇಳಿದ ಕೂಡಲೆ, ಮಾನಕುಮಾರಿಗೆ ಅತಿಶಯ ಕಷ್ಟವಾಯಿತು. ಚಂಪೆಯು ಮನೆಯಲ್ಲಿಯ ಹಿರಿಯ ಜರಠಳಿಗೆ ಬಹುಶಃ 'ಅವ್ವಾ'ಎಂದು ಕರೆಯುತ್ತಿದ್ದದರಿಂದ, ಈಕೆಯು ಆ ವೃದ್ಧಳ ಮಗಳಿರಬಹುದೆಂದು ಕಲ್ಪಿಸಿದ್ದಳು. ಮೇಲಾಗಿ ಆ ವೃದ್ಧೆಯಾದರೂ ಚಂಪೆಯ ಮೇಲೆ ಹೊಟ್ಟೆಯ ಮಗಳಂತೆ ಪ್ರೇಮ ಮಾಡುವದನ್ನು ನೋಡಿದರೆ, ಹಾಗೆ ಮಾನಕುಮಾರಿಯು ಕಲ್ಪಿಸಿದ್ದು ಸ್ವಾಭಾವಿಕವೇ ಆಗಿತ್ತು. ಆ ಮುದಕಿಯ ನಿಂದ್ಯ ಆಚರಣೆಯ ಮರ್ಮವನ್ನರಿತು ಅವಳನ್ನು ಮನಸಾ ತಿರಸ್ಕರಿಸುತ್ತಿರುವ ಮಾನಕುಮಾರಿಯು, ಚಂಪೆಯು ಆ ವೃದ್ಧೆಯ ಮಗಳೆಂದು ಅವಳನ್ನೂ ತಿರಸ್ಕರಿಸುತ್ತಿದ್ದಳು ಚಂಪೆಯಾದರೂ ಪಾತಕಿಯೂ, ಧರ್ಮಭ್ರಷ್ಟಳೂ ಎಂದು ಅವಳು ಭಾವಿಸಿದ್ದಳು; ಆದರೆ ಚಂಪೆಯ ಮುಖದಿಂದಲೇ ಆಕೆಯ ನಿಜವಾದ ಸಂಗತಿಯನ್ನರಿತುಕೊಂಡ ಮಾನಕುಮಾರಿಗೆ ಅವಳ ಬಗ್ಗೆ ಕನಿಕರ ಹುಟ್ಟಿತು. ಅವಳು ಚಂಪೆಯನ್ನು ಮುಂದಕ್ಕೆ ಕರೆದುಕೊಂಡು, ಅವಳ ಗದ್ದ-ತುಟಿಗಳನ್ನು ತನ್ನ ಶುಷ್ಕ ಹಸ್ತದಿಂದ ಹಿಡಿದು, ಅಶ್ರುಪೂರ್ಣ ನಯನಗಳಿಂದ ಅನ್ನುತ್ತಾಳೆ:-

"ಚಂಪಾ, ನೀನಾದರೂ, ನನ್ನಂತೆ ಸದಾ ದುಃಖಿನಿಯೇ ಆಗಿರುವೆ! ಉಪಾಯವಿಲ್ಲ!"

ಚಂಪೆಯು ಮಾತಾಡುತ್ತಾಳೆ:—"ಸಖೀ, ಈ ಮನೆಗೆ ಬರುವದಕ್ಕಿಂತ ಮೊದಲು, ನನಗೆ ದುಃಖ-ಕಷ್ಟಗಳೆಂದರೇನೆಂಬುದು ಗೊತ್ತೇ ಇದ್ದಿಲ್ಲ. ಯಾವಾಗಲೂ ನಾನು ಬಹುಶಃ ಗಾಯನ-ನರ್ತನಗಳನ್ನು ಮಾಡುವದರಲ್ಲಿಯೇ ಮಗ್ನಳಾಗಿರುತ್ತಿದ್ದೆನು. ನೀವು ಇಲ್ಲಿಗೆ ಒಂದ ಸ್ವಲ್ಪಾವಧಿಯಲ್ಲಿಯೇ ಬೇನೆ ಬಿದ್ದಾಗ ನಿನ್ನ ಬಡಬಡಿಸುವಿಕೆಯನ್ನು ಕೇಳಿ, ನನ್ನ ಮನದಲ್ಲಿ ಬಗೆಬಗೆಯ ಶಂಕೆ-ಕುಶಂಕೆಗಳು ಉದ್ಭವಿಸತೊಡಗಿದವು. ನಿನಗೆ ನೆಟ್ಟಗಾದ ಮೇಲೆ ನಿನ್ನ ಮುಖದಿಂದಲೇ ಎಲ್ಲ ಶಂಕೆಗಳ ನಿರಸನ ಮಾಡಿಕೊಳ್ಳಬೇಕೆಂದು ಮಾಡಿದ್ದೆನು. ಇಂದಿನ ವರೆಗೆ ನಿನ್ನ ಸಂಗಡ ಮನದಲ್ಲಿಯ ನಾಲ್ಕು ಮಾತುಗಳನ್ನಾಡುವಂಥ ಯೋಗವೇ ಬಂದಿದ್ದಿಲ್ಲ; ಮತ್ತು ಇನ್ನು ಮೇಲೆಯೂ ಅಂಥ ಸುಯೋಗವು ಬಹುಶಃ ಬರಲಿಕ್ಕಿಲ್ಲ! ಯಾಕಂದರೆ, ಹಿಂದಕ್ಕೊಮ್ಮೆ ನಾನು ಅವ್ವನೆಂದು ಕರೆಯುತ್ತಿರುವ ಆ ಮುದಕಿಯೂ, ದಾಸಿಯೂ ಏನೇನೋ ಗುಪ್ತ ಮಾತುಗಳನ್ನಾಡುತ್ತಿರುವದನ್ನು ನಾನು ಮರೆಗೆ ನಿಂತು ಕೇಳಿದ್ದೆನು ಅದರ ಮೇಲಿಂದ ನೋಡಲು, ಹೊರಗೆ ಬಂದ ಜನರು ಬಹುಶಃ ನನ್ನನ್ನು ಕರಕೊಂಡು ಹೋಗುವದಕ್ಕೆ ಬಂದಿರಬಹುದು. ಈ ಜನ್ಮದಲ್ಲಿ ಇನ್ನು ಮೇಲೆ ನಮ್ಮಿಬ್ಬರ ಭೆಟ್ಟಿಯು ಪುನಃ ಆಗುವದೋ-ಇಲ್ಲವೋ ದೇವರೇ ಬಲ್ಲ!

"ನಾಳೆ ನಿನ್ನನ್ನು ಕರಕೊಂಡು ಹೋಗುವರೋ? ಎಲ್ಲಿಗೆ ಒಯ್ಯುವರು?"

"ಲಖನೌಕ್ಕೆ ಕರದೊಯ್ಯಬಹುದು!"

"ಯಾತಕ್ಕೆ?"

"ಅಯೋಧ್ಯೆಯ ಬಾದಶಹನ ಎದುರಿಗೆ ಗಾನ-ನರ್ತನಗಳನ್ನಾಚರಿಸಲಿಕ್ಕೆ."

"ಆ ಬಾದಶಹನ ಎದುರಿಗೆ ನೀನು ಗಾಯನವನ್ನು ಮಾಡುವವಳೋ?-ನರ್ತಿಸುವವಳೋ? ಛೇ ನಮ್ಮವ್ವಾ! ಇದು ಕುಲೀನ ಸ್ತ್ರೀಯರಿಗೆ ಎಂದಾದರೂ ಶೋಭಿಸೀತೇ?"

ಚಂಪೆಯು ಹಿಂದು ದೀರ್ಘ ಉಸುರ್ಗರೆದು:—"ನನ್ನ ಇಚ್ಛೆ-ಅನಿಚ್ಛೆಗಳನ್ನು ಕೇಳುವವರಾದರೂ ಯಾರು?"

"ಚಂಪಾ, ನೀನು ಸ್ವಧರ್ಮವನ್ನು ತೊರೆಯುವವಳೋ? ಪಾತಿವ್ರತ್ಯವನ್ನು ಮಣ್ಣುಗೂಡಿಸುವವಳೋ? ಮುಸಲ್ಮಾನರ ವಿಲಾಸದಾಸಿಯಾಗುವವಳೋ? ಹಿಂದಮಾತೆಯ ಪುಣ್ಯೋದರದಲ್ಲಿ ಜನಿಸಿ ಸರ್ವರಿಗೆ ಕಲಂಕವನ್ನು ಹಚ್ಚುವವಳೋ?"

ಚಂಪೆಯು ಬಹಳ ಖಿನ್ನಳಾದಳು. ಆ ಕೋಮಲ ಬಾಲಿಕೆಗೆ ಏನೂ ತಿಳಿಯದಂತಾಗಿ ಅವಳು ಶೂನ್ಯಚಿತ್ತಳಾದಳು. ಕೊನೆಗೆ ಮತ್ತೊಂದು ನಿಟ್ಟುಸಿರು ಬಿಟ್ಟು:—"ಸಖೀ, ಧರ್ಮ-ಅಧರ್ಮಗಳೆಂದರೇನು? ಸತೀತ್ವವೆಂದು ಯಾತಕ್ಕೆ ಅನ್ನುತ್ತಾರೆ? ವಿಲಾಸದಾಸಿಯೆಂದರೇನು? ಇವು ಯಾವವೂ ನನಗೆ ಗೊತ್ತಿಲ್ಲ. ಚಿಕ್ಕಂದಿನಲ್ಲಿ ನಾನು ಯಾವಾಗಲೂ ಜಯಪಾಲಸಿಂಹನ ಸಂಗಡಲೇ ಇರುತ್ತಿದ್ದೆನು. ಪ್ರತಿದಿವಸ ನಾನು ಆತನ ಸಂಗಡ ಅಂಗಡಿಗೆ ಹೋಗುತ್ತಿದ್ದೆನು ಮುಂದೆ ತುಸ ದಿವಸಗಳಲ್ಲಿ ಅಂದರೆ ನಾನು ೮-೯ ವರ್ಷದವಳಿರುವಾಗ ಜಯಪಾಲಸಿಂಹನು ಎತ್ತೋ ಹೋಗಿಬಿಟ್ಟನು ಅಂದಿನಿಂದ ನಾನು ಇಲ್ಲೇ ಇರುತ್ತೇನೆ; ಆದರೆ ಈ ಆವಾರದ ಗೋಡೆಯನ್ನು ದಾಟಿ ಹೊರಗೆ ಹೆಜ್ಜೆಯನ್ನು ಕೂಡ ಇಟ್ಟಿಲ್ಲ! ನೀನು ಹಾಸಿಗೆಯನ್ನು ಹಿಡಿದು ಭ್ರಮಿಷ್ಟಳಾಗಿ ಬಿದ್ದಿರುವಾಗ, ನಿನ್ನ ಮುಖದಿಂದ ಹೊಂಟ ನಾನಾ ತರದ ಆಶ್ಚರ್ಯಕರವಾದ ಅಸಂಬದ್ಧ ಮಾತುಗಳನ್ನು ಕೇಳಿ, ನನ್ನಲ್ಲಿ ಬಗಬಗೆಯ ಶಂಕೆ-ಕುಶಂಕೆಗಳು ಉತ್ಪನ್ನವಾಗತೊಡಗಿದವು ನಿನ್ನ ಬಡಬಡಿಕೆಗಳನ್ನು ಕೇಳಿಯೇ ನನ್ನಲ್ಲಿ ಬಾಹ್ಯಜಗತ್ತಿನ ಕಲ್ಪನೆಯು ತುಸ ತುಸ ಪ್ರತಿಬಿಂಬಿಸಹತ್ತಿತು. ನೀನು ಭ್ರಾಂತಿಷ್ಟಳಾಗಿರುವಾಗ ಹಿವ್ಮೆ 'ಪ್ರಾಣನಾಥ! ಜೀವಿತೇಶ್ವರ!' ಎಂದು ಬಡಬಡಿಸುತ್ತಿದ್ದೆ; ಮತ್ತೊಮ್ಮೆ 'ಅಪ್ಪಾ-ಅಪ್ಪಾ, ಅಣ್ಣಾ' ಹೀಗೆಂದು ಹಿಟಗುಟ್ಟುತ್ತಿದ್ದೆ; ಇನ್ನೊಮ್ಮೆ ನನ್ನನ್ನು ನೋಡಿ 'ಅಯೋಧ್ಯಾನಾಥ! ಅಯೋಧ್ಯಾನಾಥ!' ಎಂದು ಚೀತ್ಕರಿಸುತ್ತಲೂ, ಹಿವ್ಮೊಮ್ಮೆ ನನ್ನ ಮೋರೆಯ ಮೇಲೆ ಕೈಯಾಡಿಸಿ, 'ಇದು ಕೇವಲ ಅವರ ಮುಖದಂತೆಯೇ ತೋರುತ್ತದೆ!' ಹೀಗೆಂದೂ ಏನೇನೋ ಅನ್ನುತ್ತಿದ್ದೆ? ಇವೆಲ್ಲ ನಿನ್ನ ಅನ್ಯೋನ್ಯ ಸಂಬಂಧವಿಲ್ಲದ

ಮಾತುಗಳ ಮರ್ಮವೇ ನನಗೆ ತಿಳಿಯದು. 'ಪ್ರಾಣನಾಥ ಅಂದರೇನು? ಜೀವಿತೇಶ್ವರನೆಂದು ಯಾರಿಗೆ ಅನ್ನುತ್ತಾರೆ? ಹೃದಯೇಶ್ವರ ಹೀಗೆಂದರೇನು?' ಮುಂತಾದವುಗಳ ಕಲ್ಪನೆಯೇ ನನಗಿಲ್ಲದ ಮೂಲಕ, ಇವೆಲ್ಲ ಸಂಗತಿಗಳ ನಿರ್ಣಯುವನ್ನು ನಿನ್ನ ಮುಖದಿಂದಲೇ ಮಾಡಿಕೊಳ್ಳಬೇಕೆಂದು ನಾನು ನಿಶ್ಚಯಿಸಿದೆನು. ಅಂದಿನಿಂದ ನನ್ನ ಮನಕ್ಕೆ ಒಂದು ತರದ ಹುರುಹುರವೆನಿಸಹತ್ತಿತು.

ಮಾನಕುಮಾರಿಯು ಆತುರತೆಯಿಂದ: "ಇರಲಿ, ಈಗ ಹೇಳು. ಹೇಳಬೇಕಾಗಿದ್ದ ನಿನ್ನ ಸಂಗತಿಯನ್ನು! ಅತಿ ಉತ್ಸುಕತೆಯಿಂದ ಕೇಳುವದಕ್ಕೆ ನಾನು ಸಿದ್ಧಳಿದ್ದೇನೆ"

"ಅಕ್ಕಾ, ನನ್ನ ಎಲ್ಲ ಸಂಗತಿಯು ಬಹಳ ಬೇಸರ ಬರುವಂಥದಿರುವದು."

"ಏನೇ ಇರಲಿ, ಹೇಗೇ ಇರಲಿ. ನಿನ್ನ ಮನಸ್ಸಿನಲ್ಲಿದ್ದದ್ದನ್ನೆಲ್ಲ ಬೇಗನೆ ಹೇಳು"

"ಹಾಗಾದರೆ ಕೇಳು" ಎಂದು ಚಂಪೆಯು ಸಾದ್ಯಂತವಾಗಿ ತನಗೆ ಗೊತ್ತಿದ್ದಷ್ಟು ಸಂಗತಿಯನ್ನು ಹೇಳತೊಡಗಿದಳು: "ಅಕ್ಕಾ, ದರ್ಶನಸಿಂಹನ ತಂದೆಯಾದ ಜಯಪಾಲಸಿಂಹನು ನನ್ನನ್ನು ಹೊಟ್ಟೆಯ ಮಗಳಂತೆ ಪ್ರೀತಿಸುತ್ತಿದ್ದನು. ಚಿಕ್ಕಂದಿನಲ್ಲಿ ನನ್ನನ್ನು ಎತ್ತಿಕೊಂಡು ಪ್ರೀತಿಯಿಂದ ಮುದ್ದಾಡುತ್ತ ಅಂಗಡಿಗೆ ಕರಕೊಂಡು ಹೋಗುತ್ತಿದ್ದನು ನಾನು ಬೇಡಿದ ತಿಂಡಿಗಳನ್ನು ತಂದುಕೊಡುತ್ತಿದ್ದನು. ನಾನು ಅಂಗಡಿಯಲ್ಲಿ ಆತನ ತೊಡೆಯ ಮೇಲೆಯೇ ಕೂತಿರುತ್ತಿದ್ದೆನು. ವ್ಯಾಪಾರೋದ್ಯೋಗಗಳ ಸಲುವಾಗಿ ಆತನ ಕಡೆಗೆ ಎಷ್ಟೋ ಜನರು ಬರುತ್ತಿದ್ದರು. ಆಗ್ಗೆ ಒಮ್ಮೊಮ್ಮೆ ನನ್ನ ಎದುರಿಗೆಯೇ: "ಈ ನಮ್ಮ ಸೀತೆಗೆ ಅನುರೂಪನಾದ ಬ್ರಾಹ್ಮಣ ಕುಲದ ವರನಿದ್ದರೆ ನನಗೆ ತಿಳಿಸಿರಿ" ಎಂದು ಹೇಳುತ್ತಿದ್ದನು. ಈ ನನ್ನ ಸೀತೆಗೆ 'ಹತ್ತು ಸಾವಿರದ ವರೆಗೆ ವರದಕ್ಷಿಣೆಯನ್ನು ಕೊಡುವೆನು!' ಎಂದು ಸಹ ಆತನು ಅನ್ನುತ್ತಿದ್ದನು.

"ಆ! ನಿನ್ನ ಹೆಸರು ಚಂಪೆಯಲ್ಲವೆ!"

"ಜಯಪಾಲಸಿಂಹನು ನನಗೆ ಸೀತೆಯೆಂದು ಕರೆಯುತ್ತಿದ್ದನು; ಮತ್ತು ಆಗ್ಗೆ ಎಲ್ಲರೂ ನನಗೆ ಹಾಗೆಯೇ ಕರೆಯುತ್ತಿದ್ದರು; ಆದರೆ

ಜಯಪಾಲಸಿಂಹನು ಹೋದಬಳಿಕ ಮುಂದೆ ತುಸ ದಿವಸಗಳಲ್ಲಿ ನೀನು ಬಂದ ಬಳಿಕ ನನಗೆ 'ಚಂಪಾ' ಎಂದೂ, ನಿನಗೆ 'ಚಪಲಾ' ಎಂದೂ ಕರೆಯಲಿಕ್ಕೆ ದರ್ಶನಸಿಂಹನ ಆಜ್ಞೆಯಾಯಿತು.''

''ಹೀಗೋ? ಇರಲಿ, ನಿನ್ನ ಸಂಗತಿಯನ್ನು ಮುಂದೆ ಹೇಳು.''

''ಜಯಪಾಲನ ಮಾತಿನ ಮರ್ಮವೇನೂ ನನಗೆ ಆಗ್ಗೆ ಹೊಳೆಯಲಿಲ್ಲ. ವರದಕ್ಷಿಣೆಯೆಂದರೇನು? ವರ ಅಂದರೇನು? ಇದು ಸಹ ನನಗೆ ಗೊತ್ತಿದ್ದಿಲ್ಲ. ಮುಂದೆ ಜಯಪಾಲನಿಗೆ ಜಡ್ಡಾಯಿತು. ಕಾರಣ, ಆತನು ತನ್ನ ವ್ಯಾಪಾರೋದ್ಯೋಗವನ್ನು ನಿಲಿಸಿ, ಈ ಮನೆಯಲ್ಲಿ ಇರಹತ್ತಿದನು. ಅಂದಿನಿಂದ ನಾನು ಇಲ್ಲಿಂದ ಹೊರಬಿದ್ದಿಲ್ಲೆಂದು ಹೇಳಬಹುದು. ಮುಂದೆ ಬರಬರುತ್ತ ಜಯಪಾಲನ ಜಡ್ಡು ಹೆಚ್ಚಾಗುತ್ತ ನಡೆದದ್ದರಿಂದ, ಅವನನ್ನು ಲಖನೌಕ್ಕೆ ಕರಕೊಂಡು ಹೋಗುವದರ ಸಲುವಾಗಿ ದರ್ಶನಸಿಂಹನು ಬಂದನು. ಇದಕ್ಕೂ ಮೊದಲು ಎಂದಾದರೊಮ್ಮೆ ಆತನು ತಂದೆಯ ಭೆಟ್ಟಿಗೆಂದು ಬರುತ್ತಿದ್ದನು; ಆದರೆ ಕಡೆಯ ಸಾರೆ ಬಂದಾಗ್ಗೆ ಆತನು ನನಗೆ ಗಾಯನ-ನರ್ತನಗಳನ್ನು ಕಲಿಸಬೇಕೆಂದು ಈ ಮುದಕಿಗೆ ಅಪ್ಪಣೆ ಮಾಡಿದನು; ಈ ಬಗ್ಗೆ ಪರಸ್ಪರರಲ್ಲಿ ಗುಪ್ತ ಮಾತು-ಕಥೆಗಳಾದದ್ದು ನನಗೆ ಇನ್ನೂ ನೆನಪಿದೆ ದರ್ಶನಸಿಂಹನ ಹೇಳಿಕೆಯಂತೆ ಮುದಕಿಯು ನನಗೆ ಹಾಡು ಬಾರಿಸಲಿಕ್ಕೆ ಕಲಿಸಹತ್ತಿದಳು. ಆ ಕಾಲಕ್ಕೆ ನಾನು ಹಿಂಬತ್ತು ವರುಷದವಳಿರಬಹುದು; ಆದರೆ ಅವ್ವನು ನನಗೆ ಹಾಡಲಿಕ್ಕೂ, ಬಾರಿಸಲಿಕ್ಕೂ ಕಲಿಸುವದು ಜಯಪಾಲಸಿಂಹನ ಮನಸ್ಸಿಗೆ ಬರುತ್ತಿದ್ದಿಲ್ಲ. ಆತನು ಇದಕ್ಕಾಗಿ ಎಲ್ಲರ ಮೇಲೆ ಸಿಟ್ಟಿಗೇಳುತ್ತಿದ್ದನು. ಗಾಯನ-ನರ್ತನಗಳನ್ನು ಕುಲೀನಸ್ತ್ರೀಯರು ಕಲಿಯಬಾರದೆಂದು ಆತನು ಅಂತಃಕರಣದಿಂದ ನನಗ ಉಪದೇಶ ಮಾಡುತ್ತಿದ್ದನು. ಹಿಮ್ಮೆಯಂತೂ ಆತನು ದರ್ಶನಸಿಂಹನಿಗೂ, ಅವ್ವನಿಗೂ ಬಾಯಿಗೆ ಬಂದಂತೆ ಬೈದು, ಹೀಗೆ ನಮ್ಮ ಸೀತೆಗೆ ಇಲ್ಲದ ನಾದವನ್ನು ಹಚ್ಚಿದರೆ, ಪರಿಣಾಮವು ಹಿಳಿತಾಗಲಿಕ್ಕಿಲ್ಲೆಂದು ರೊಚ್ಚಿನಿಂದ ಹೇಳಿದನು. ಕೊನೆಗೆ ಹಿಮ್ಮೆ ಆತನು ದರ್ಶನಸಿಂಹನ ಸಂಗಡ ಭಯಂಕರ ರೀತಿಯಿಂದ ಜಗಳಾಡಿ, ಅವ್ವನಿಗೆ ಸ್ಪಷ್ಟವಾಗಿ ಹೇಳಿದ್ದೇನಂದರೆ:—''ನಾನು ಹೊಟ್ಟೆಯ ಮಗಳಂತೆ ಈ ಅನಾಥ

ಬಾಲಿಕೆಯನ್ನು ಇಲ್ಲಿಯ ವರೆಗೆ ಸಂರಕ್ಷಿಸಿರುವೆನು ನನ್ನ ದೇಹದಲ್ಲಿ ಜೀವವಿರುವ ವರೆಗೆ ನಾನು ಇವಳನ್ನು ಕೆಟ್ಟ ಮಾರ್ಗಕ್ಕೆಂದೂ ಹಚ್ಚಗೊಡಲಾರೆನು!'' ನನಗೆ ಅವರ ಜಗಳದ ಕಾರಣವೇ ತಿಳಿಯಲಿಲ್ಲ. ನನ್ನ ಆಗಿನ ಹುಡುಗಬುದ್ಧಿಗುಚಿತವಾಗಿ ಗಾಯನ-ನರ್ತನಗಳನ್ನು ಕಲಿಯುವದು ನನಗೆ ಒಂದು ಪ್ರಕಾರದ ಆನಂದವೆನಿಸುತ್ತಿತ್ತು ಮುದಕಿಯಾದರೂ ಕಲಿಸಲಿಕ್ಕೆ ತತ್ಪರಳಿದ್ದದರಿಂದ, ನಾನು ಜಯಪಾಲನಿಗೆ ಗೊತ್ತಾಗದಂತೆ ಕಲಿಯತೊಡಗಿದೆನು.

''ತಂಡೆ-ಮಕ್ಕಳಲ್ಲಿ ಜಗಳವೆಸಗಿದ ಮರುದಿವಸವೇ ಜಯಪಾಲನ ಬೇನೆಯು ಹೆಚ್ಚಾಯಿತು. ಒಮ್ಮಿಂದೊಮ್ಮೆ ಆತನ ಬಾಯಿಯೇ ಬಂದಾಯಿತು. ಆಗ ದರ್ಶನಸಿಂಹನು ಅವನನ್ನು ಕರಕೊಂಡು ಲಖನೌಕ್ಕೆ ಹೋದನು; ನಾನು ಮಾತ್ರ ಇಲ್ಲಿಯೇ ಇರಹತ್ತಿದೆನು. ಆಗಂತೂ ಇವರಿಗೆ ಸಂಪೂರ್ಣ ಸ್ವರಾಜ್ಯವೇ ದೊರೆತಂತಾಯಿತು. ಉತ್ಸಾಹದಿಂದಲೂ, ಕಾಳಜಿಯಿಂದಲೂ ಈ ಮುದಕಿಯು ತನ್ನ ಕಾರ್ಯಕ್ರಮವನ್ನು ನಡೆಯಿಸಹತ್ತಲು, ನಾನಾದರೂ ಅದಕ್ಕೆ ಒಪ್ಪಿಗೆಯನ್ನೇ ಕೊಟ್ಟೆನು. ಈ ಮುದಕಿಯು ಒಮ್ಮೊಮ್ಮೆ ಗಾಯನ-ನರ್ತನಗಳನ್ನು ಕಲಿಸುವ ಭರದಲ್ಲಿ ನನ್ನನ್ನು ಹಿಡಿದೆತ್ತಿ ಮುದ್ದಿಸಿ: ''ಬೇಟಾ, ನೀನು ಚಲೋ ರೀತಿಯಿಂದ ಈ ಕಲೆಯನ್ನು ಕಲಿತರೆ, ನಿಶ್ಚಯವಾಗಿ ಬಾದಶಹನ ಬೇಗಮೆಯಾಗುವಿ! ತುಸ ದೊಡ್ಡವಳಾದ ಮೇಲೆ ದರ್ಶನನು ನಿನ್ನನ್ನು ಬಾದಶಹನ ರಂಗಮಹಾಲಿಗೆ ಕಳಿಸುವನು.'' ಎಂದು ಅನ್ನುತ್ತಿದ್ದಳು. ಅವಳ ಈ ಮಾತುಗಳನ್ನು ಕೇಳಿ ನನಗೆ ಆನಂದವೇ ಆಗುತ್ತಿತ್ತು. ನಾನು ಹೆಚ್ಚಿಗೆ ಉತ್ಸಾಹದಿಂದ ಅಭ್ಯಾಸ ಮಾಡಹತ್ತಿದೆನು ಸೇವಕರಿಗೂ, ದಾಸಿಗೂ 'ನಾನು ತೀವ್ರವೇ ಬಾದಶಹನ ಬೇಗಮೆಯಾಗತಕ್ಕವಳು!' ಎಂದು ಡೌಲಿನಿಂದ ಹೇಳುತ್ತಿದ್ದೆನು; ಆದರೆ ನನ್ನ ಮಾತುಗಳನ್ನು ಕೇಳಿ ಅವರು ತಮ್ಮ ಗಲ್ಲದಲ್ಲಿಯೇ ನಗುತ್ತಿದ್ದರು! ಈ ಕ್ರಮವು ಮೊನ್ನೆ ಮೊನ್ನಿನ ವರೆಗೆ ನಡೆದಿತ್ತು. ನನ್ನಂಥ ಭಾಗ್ಯವಂತರು ತ್ರಿಭುವನದಲ್ಲಿ ಯಾರೂ ಇರಲಿಕ್ಕಿಲ್ಲೆಂದು ನಾನು ಮನದಲ್ಲಿಯೇ ನಂಬಿದ್ದೆನು.

"ಹಲವು ದಿವಸಗಳ ಕೆಳಗೆ ದಾಸಿಗೂ, ಈ ಮುದುಕಿಗೂ ಯಾವದೊಂದು ಮಾತಿನ ಸಲುವಾಗಿ ಜಗಳವಾಯಿತು. ಆಗ ದಾಸಿಯು ನನ್ನನ್ನು ಏಕಾಂತದಲ್ಲಿ ಕರೆದು ನನಗೆ ಹೇಳಿದ್ದೇನಂದರೆ:— "ಈ ಮುದುಕಿಯು ಜಯಪಾಲನ ಮನೆಗೆ ಬರುವ ಮೊದಲು ವೇಶ್ಯೆಯ ಕೆಲಸವನ್ನು ಮಾಡುತ್ತಿದ್ದಳು; ಇವಳಂಥ ಪಾಪಿಷ್ಠ ಸ್ತ್ರೀಯು ಇನ್ನೊಬ್ಬಳಿರಲಿಕ್ಕಿಲ್ಲ!" ಆದರೆ ವೇಶ್ಯೆ ಅಂದರೇನು? ಅವರ ಕೆಲಸವೆಂದರೇನು? ಇದು ಯಾವದೂ ನಾನರಿಯೆನಾದ್ದರಿಂದ, ದಾಸಿಯೇ ನನಗೆ ಎಲ್ಲವನ್ನೂ ತಿಳಿಸಿ ಹೇಳಿದಳು. ನನ್ನ ಅಣ್ಣನನ್ನೂ, ತಂದೆಯನ್ನೂ ಕೊಂದ ಠಕ್ಕರು ನನ್ನನ್ನು ತೆಗೆದುಕೊಂಡು ಹೋಗುವ ಕಾಲಕ್ಕೆ, ಓರ್ವ ಸಾಹೇಬನ ಕಡೆಯಿಂದ ಜಯಪಾಲನು ನನ್ನನ್ನು ಇಸಗೊಂಡು ಬಂದ ಸುದ್ದಿಯನ್ನಾದರೂ ದಾಸಿಯೇ ನನಗೆ ಹೇಳಿದಳು ಇದಕ್ಕೂ ಮೊದಲು ಜಯಪಾಲನೇ ತಂದೆಯೆಂತಲೂ, ಈ ಮುದುಕಿಯೇ ತಾಯಿಯೆಂತಲೂ ನಾನು ತಿಳಿದಿದ್ದೆನು; ಆದರೆ ದಾಸಿಯ ಮಾತಿನಿಂದ ನನ್ನ ಆ ಭ್ರಮವು ದೂರವಾಯಿತು ಪಾಪ ಪುಣ್ಯಗಳ ವಿಚಾರವೇ ಇಲ್ಲದ ಈ ರಕ್ಕಸಿಯು ನನ್ನ ಜನ್ಮವನ್ನು ಮಣ್ಣುಗೂಡಿಸಬೇಕೆಂದು ಮಾಡಿರುವಳೆಂಬದನ್ನು ಸಹ ದಾಸಿಯೇ ಹೇಳಿದಳು"

"ಚಂಪಾ! ನಿಜವಾಗಿಯೇ ಅವಳು ಅಂಥ ರಕ್ಕಸಿಯು! ಈಕೆಯ ಲಕ್ಷಣವೆಲ್ಲ ಅವಳ ಮುಖದ ಮೇಲಿಂದಲೇ ತಿಳಿಯುತ್ತಿದೆ!"

"ಅಂದಿನಿಂದ ಇವಳ ವಿಷಯಕ್ಕೆ ನನ್ನಲ್ಲಿ ಸಹ ತಿರಸ್ಕಾರವು ಹುಟ್ಟಹತ್ತಿತು. ದಾಸಿಯಿಂದ ನನ್ನ ಅಣ್ಣನ ಮತ್ತು ತಂದೆಯ ಸುದ್ದಿಯನ್ನು ಕೇಳಿದಂದಿನಿಂದ ನನಗೆ ತೀರ ಚಿಕ್ಕಂದಿನಲ್ಲಿಯ ಹಲ ಕೆಲವು ಸಂಗತಿಗಳು ನೆನಪಾಗತೊಡಗಿದವು. ನಾನು ಸಣ್ಣವಳಿರುವಾಗ ಒಬ್ಬ ಸ್ತ್ರೀಯು ನನ್ನನ್ನು ಎತ್ತಿಕೊಂಡು ಮುದ್ದಿಡುವದೂ, ಒಬ್ಬ ವೃದ್ಧ ಗೃಹಸ್ಥನು ಪ್ರೇಮದಿಂದ ನನ್ನನ್ನು ಹೆಗಲಮೇಲೆ ಕುಳ್ಳಿರಿಸಿಕೊಳ್ಳುವದೂ ನನ್ನ ಸ್ಮರಣದಲ್ಲಿ ಬರಹತ್ತಿತು; ಆದರೆ ಠಕ್ಕರು ಅವರೆಲ್ಲರನ್ನು ಕೊಂದದ್ದರಿಂದ, ಅವರಲ್ಲಿ ಒಬ್ಬರದೂ ನನಗೆ ಭೆಟ್ಟಿಯಾಗಿಲ್ಲ; ಈ ಜನ್ಮದಲ್ಲಿ ಭೆಟ್ಟಿಯಾಗುವ ಸಂಭವವೂ ಇಲ್ಲ!" ತಾಯಿ-ತಂದೆಗಳ ಸ್ಮರಣವಾದ್ದರಿಂದ ಚಂಪೆಯ ಕಂಠವು ಬಿಗಿದು

ಅವಳ ವಿಶಾಲ ನೇತ್ರಗಳೊಳಗಿಂದ ಒಂದೆರಡು ಹನಿಗಳು ಆಕೆಯ ಉನ್ನತ ಹೃದಯ ಪ್ರದೇಶದ ಮೇಲೆ ಉದರಿದವು

"ಚಂಪಾ! ದುಃಖಿಸಬೇಡವ್ವಾ! ದೈವದ ಮುಂದೆ ಯಾರ ಆಟವು ನಡೆಯುವದು?" ಎಂದು ಚಂಪೆಯ ಕಣ್ಣೀರನ್ನೊರಿಸುತ್ತ ಚಪಲೆ (ಮಾನಕುಮಾರಿ)ಯು ನುಡಿದಳು.

"ಅಕ್ಕಾ, ಚಪಲಾಕ್ಷೀ! ಈ ಜಗತ್ತಿನಲ್ಲಿ ನನ್ನವರೆನ್ನುವವರು ಒಬ್ಬರೂ ಉಳಿದಿಲ್ಲ! ಜಗತ್ತೇ ನನಗೆ ಶೂನ್ಯವಿದೆಯೆಂದು ಅಂದರೂ ಚಿಂತೆಯಿಲ್ಲ ಧರ್ಮಾಧರ್ಮವೆಂದರೇನು? ಸುಪಥವು ಯಾವದು? ಕುಪಥವೆಂದು ಯಾತಕ್ಕನ್ನುವರು? ಇದೆಲ್ಲವನ್ನು ತಿಳಿಯುವಷ್ಟು ಬುದ್ಧಿಯು ನನ್ನಲ್ಲಿಲ್ಲ. ನಾನು ಎಷ್ಟೋ ದಿವಸಗಳಿಂದ ಇವೆಲ್ಲ ಸಂಗತಿಗಳ ಬಗ್ಗೆ ವಿಚಾರ ಮಾಡುತ್ತಿದ್ದರೂ ನನಗೆ ಒಂದೂ ಹೊಳೆದಿಲ್ಲ ಎರಡು ವರುಷಗಳ ಹಿಂದೆ ನೀನು ಇಲ್ಲಿಗೆ ಬಂದೆ ಜಯಪಾಲನು ನನ್ನ ಹೆಸರನ್ನು ಸೀತೆಯೆಂದು ಇಟ್ಟಿದ್ದು, ದರ್ಶನಸಿಂಹನು ಆ ಹೆಸರನ್ನು ತೆಗೆದು ಚಂಪೆಯೆಂದು ಕರೆಯಲಿಕ್ಕೆ ಯಾಕೆ ಹೇಳಿದನೆಂಬದು ನನಗೆ ತಿಳಿಯದಾಯಿತು. ನಾನು ಈ ಬಗ್ಗೆ ಈ ಇಬ್ಬರೂ ಮುದಕಿಯರನ್ನು ಕೇಳಿದೆನು; ಆದರೆ ಅವರು ಏನೂ ಹೇಳದೆ, ತಿರುಗಿ ನನಗೇ ಉದ್ಧಟಳೆಂದು ಗದ್ದರಿಸಿದರು! ಏನೇ ಇರಲಿ, ಆ ವೃದ್ಧಳ ಕೃತಿಯಲ್ಲಿ ಏನಾದರೂ ಗೂಢಾರ್ಥವಿರಲಿಕ್ಕೆ ಬೇಕು ಇದು ಮಾತ್ರ ನಿಶ್ಚಯವು! ಸುಮಾರು ತಿಂಗಳೆರಡು ತಿಂಗಳ ಹಿಂದೆ ನಮ್ಮಿಬ್ಬರನ್ನು ಲಖನೌಕ್ಕೆ ಒಯ್ಯತಕ್ಕವರಿರುವರೆಂದು ದಾಸಿಯಿಂದ ತಿಳಿದಿತ್ತು; ಆದರೆ, ನೀನು ಗಾಯನ-ನರ್ತನಗಳನ್ನು ಕಲಿಯದಿರುವದರಿಂದ ಈಗಲೇ ನಮ್ಮನ್ನು ಲಖನೌಕ್ಕೆ ಒಯ್ಯಲಿಕ್ಕಿಲ್ಲೆಂದು ಈ ಹಿರೇ ಮುದಕಿಯೇ ಹೇಳಿದ್ದಳು; ಆದರೆ ಈಗ ಜನರು ಆನೆ-ಪಲ್ಲಕ್ಕಿ ಮುಂತಾದ ಸಾಹಿತ್ಯಗಳೊಡನೆ ಬಂದಿರುವದನ್ನು ನೋಡಿದರೆ, ಇವರು ಬಹುಶಃ ನನ್ನೊಬ್ಬಳನ್ನೇ ಒಯ್ಯಲಿಕ್ಕೆ ಬಂದಂತೆ ತೋರುತ್ತದೆ ಅಂದಮೇಲೆ ಈಗ ಹೇಗೆ ಮಾಡಬೇಕು? ಜಯಪಾಲಸಿಂಹನ ಕಡೆಗೆ ನನ್ನನ್ನು ಕರೆದೊಯ್ಯುತ್ತಿದ್ದರೆ, ನಾನು ಹೋಗಲಿಕ್ಕೆ ಒಂದೇ ಕಾಲಮೇಲೆ ಸಿದ್ಧಳಿರುತ್ತೇನೆ. ಯಾಕಂದರೆ ಜಯಪಾಲನು ನನ್ನ ಖಾಸ ತಂದೆಯಾಗಿರದಿದ್ದರೂ, ಆತನು ತನ್ನ ಕೈಲಾದಷ್ಟು

ನನ್ನ ಕಲ್ಯಾಣವನ್ನೇ ಮಾಡಬಹುದೆಂಬ ನಂಬುಗೆಯು ನನ್ನಲ್ಲಿರುತ್ತದೆ; ಆದರೆ ಬೇನೆ ಬಿದ್ದು ಇಲ್ಲಿಂದ ಹೋದಂದಿನಿಂದ ಆತನ ಸುದ್ದಿಯೇ ಇಲ್ಲ; ಆದ್ದರಿಂದ ನನಗೆ ಬಹು ಅಂಜಿಕೆಯು ಬರುತ್ತದೆ ಈ ಜನರು ಏನು ಗುಪ್ತಾಲೋಚನೆಯನ್ನು ಮಾಡಿ ಇಲ್ಲಿಗೆ ಬಂದಿರುವರೋ, ಕೆಳಗೆ ಏನೇನು ನಡಿಸಿರುವರೋ ದೇವರೇ ಬಲ್ಲ!"

ಚಂಪೆಯು ಈ ಎಲ್ಲ ಹೇಳಿಕೆಯನ್ನು ರೋಗಗ್ರಸ್ತ ಮಾನಳು ಮಾರಿಯು-ಚಪಲೆಯು ಹಿಂದೇ ಮನದಿಂದ ಕೇಳುತ್ತ ಕುಳಿತಿದ್ದಳು. ಚಂಪೆಯು ಮಾತು ಮುಗಿದು ಎಷ್ಟೋ ಹೊತ್ತಾದರೂ ಚಪಲೆಯು ಸ್ತಬ್ಧಳೇ ಇದ್ದಳು ಅವಳು ಮನಸಿನಲ್ಲಿಯೇ ಏನೋ ಗಂಭೀರ ವಿಚಾರವನ್ನು ಮಾಡುತ್ತಿರುವಳೆಂಬಂತೆ ತೋರುತ್ತಿತ್ತು. ಚಂಪೆಗೆ ಏನು ಉತ್ತರವನ್ನು ಕೊಡಬೇಕೆಂಬ ಬಗ್ಗೆ ಅವಳು ಮನದಲ್ಲಿ ವಿಚಾರವನ್ನು ನಡೆಸಿದ್ದಳು ಕಡೆಗೂ ನಿಶ್ಚಯವೇ ಆಗಲೊಲ್ಲದು. ಹೀಗೆ ಸ್ವಲ್ಪ ಕಾಲವು ಕ್ರಮಿಸಿದ ಬಳಿಕ ಸಾಧುಸಿಂಹನ ಸಂಗಡ ಗುಪ್ತಾಲೋಚನೆಯನ್ನು ಮಾಡಿ, ಮೇಲೆ ಏರಿ ಬರತೊಡಗಿದ್ದ ಮುದಕಿಯ ಕಾಲುಸಪ್ಪಳವಾದ ಕೂಡಲೆ, ಆ ಇಬ್ಬರೂ ತರುಣಿಯರು ಶುದ್ಧಿಯ ಮೇಲೆ ಬಂದರು. ಆಗ ಚಪಲೆಯು:-"ಚಂಪಾ, ಸುಮ್ಮನಿರು ಆ ರಾಕ್ಷಸಿಯು ಬರತೊಡಗಿದಳೆಂಬಂತೆ ತೋರುತ್ತದೆ. ಅವಳು ಇಲ್ಲಿಗೇ ಬರಬಹುದು ಇನ್ನೇನೂ ಮಾತಾಡಬೇಡ. ಚಂಪಾ! ನೀನು ನಿಜವಾಗಿಯೇ ಹತಭಾಗ್ಯಳಿರುತ್ತೀ! ನಿನ್ನ ದುಃಸ್ಥಿತಿಯನ್ನು ನೋಡಿ, ನನಗೆ ನನ್ನ ದುಃಖದ ವಿಸ್ಮೃತಿಯಾಗುತ್ತದೆ. ಇರಲಿ. ಇಂದು ರಾತ್ರಿ ಎಲ್ಲರೂ ಮಲಗಿದ ಮೇಲೆ ನೀನು ಮೆಲ್ಲನೆ ನನ್ನ ಕೋಣೆಗೆ ಬಾ; ಅಂದರೆ ಅಗ್ಗೆ ಎಲ್ಲ ವಿಚಾರವನ್ನೂ ಮಾಡೋಣ."

ಚಪಲಾಕ್ಷಿಯು ಹೇಳಿದಂತೆ ಬರಲಿಕ್ಕೆ ಚಂಪೆಯು ಸಮ್ಮತಿಸಿದಳು. ಅಷ್ಟರಲ್ಲಿ ಆ ವೃದ್ಧಳು ಮೇಲೆ ಬಂದು:—"ದರ್ಶನನು ನಮ್ಮೆಲ್ಲರನ್ನು ಕರಕೊಂಡು ಹೋಗುವ ಸಲುವಾಗಿ ಮನುಷ್ಯರನ್ನು ಕೊಟ್ಟು ಕಳಿಸಿರುವನು ನಾಳೆ ಮುಂಜಾನೆ ಲಖನೌಕ್ಕೆ ಹೋಗಲಿಕ್ಕೆ ಬೇಕು. ಅಲ್ಲಿಗೆ ಕಂಪನೀಸರಕಾರದ ಗವ್ಹರ್ನರನು ಬರತಕ್ಕವನಿರುವದರಿಂದ, ದೊಡ್ಡ ದರಬಾರು ಕೂಡುವದಿರುತ್ತದಂತೆ; ಅದನ್ನು

ನೋಡಲಿಕ್ಕೆ ದೂರದೂರಿನ ಸಾವಿರಾರು ಜನರು ಬರತಕ್ಕವರಿರುವ ರಂತೆ; ಅಗ್ಗೆ ಬಗೆ ಬಗೆಯ ಆಟ-ನೋಟಗಳೂ, ನಾಚು-ರಂಗುಗಳೂ ಆಗತಕ್ಕವಿರುವದರಿಂದ, ಇವೆಲ್ಲವನ್ನು ನೋಡಲಿಕ್ಕೆ ನಮ್ಮೆಲ್ಲರನ್ನು ಕರೆಸಿರುವನು. ನಾಳೆ ಮುಂಜಾವಿನಲ್ಲಿಯೇ ಹೊರಡೋಣ''

ವೃದ್ಧಳ ಈ ಮಾತಿಗೆ ತರುಣಿಯರಲ್ಲಿ ಒಬ್ಬರೂ ಉತ್ತರ ಕೊಡ ಲಿಲ್ಲ. ಪಾಪ! ಆ ಅನಾಥೆಯರು ಉತ್ತರ ಕೊಡವದಾದರೂ ಏನು? ಮೌನವು ಅರ್ಧ ಸಮ್ಮತಿಯೆಂದು ತಿಳಿದು, ಆ ಮುದಕಿಯಾದರೂ ಹೆಚ್ಚು ಮಾತಾಡದೆ ಹೊರಟು ಹೋದಳು.

---

## ಮೀನ ನುಂಗಿದ ಮಾಣಿಕವು!

ಸಾಯಂಕಾಲವು. ಭಗವಾನ್ ಸೂರ್ಯನಾರಾಯಣನು ಧರಿತ್ರಿಯಲ್ಲಿಯ ಪಾಪಾಚರಣೆಗಳನ್ನು ನೋಡಿ ನೋಡಿ, ಸಹಿಸಲಾ ರದೆ ಸಿಟ್ಟಿಗೆದ್ದವರಂತೆ ಆರಕ್ತಮುಖದಿಂದ ಸಮುದ್ರವನ್ನು ದುಮು ಕಲಿಕ್ಕೆ ಪಶ್ಚಿಮಾದ್ರಿಯನ್ನೇರಿದ್ದಾನೆ. ಸಂಧ್ಯಾಪ್ರಕಾಶವು ಕಡಿಮೆ ಯಾಗುತ್ತ ಸಾಗಿದ್ದು, ಕೃಷ್ಣವಸ್ತ್ರಪರಿಧಾನೆಯಾದ ನಿಶಾದೇವಿಯು ಮೆಲ್ಲಗೆ ತಲೆಯೆತ್ತ ತೊಡಗಿದ್ದಾಳೆ. ರಾಜಾ ದರ್ಶನಸಿಂಹನ ಕಡೆ ಯಿಂದ ಬಂದ ಜನರು ತಮ್ಮ ಸಂಜೆಯ ಅಡಿಗೆಯ ಸಿದ್ಧತೆಗೆ ತೊಡ ಗಿದ್ದಾರೆ. ಚಂಪಾ-ಚಪಲೆಯರು ಹತಬುದ್ಧರಾಗಿ, ಏನಾದರೊಂದು ಕಲ್ಪನೆಯನ್ನು ಮಾಡುತ್ತ, ಯಾರೂ ಇಲ್ಲದ ಸಮಯವನ್ನು ನೋಡಿ ತಮ್ಮ ತಮ್ಮೊಳಗೆ ಗುಣುಗುಟ್ಟುತ್ತ ಒತ್ತಟ್ಟಿಗೆ ಕುಳಿತುಕೊಂಡಿ ದ್ದಾರೆ. ಮನೆಯ ಯಜಮಾನತಿಯು ಒಮ್ಮೆ ಸಾಧುಸಿಂಹನ ಸಂಗಡ ರಾಜಾ ದರ್ಶನಸಿಂಹನ ಪ್ರಗತಿಯ ಬಗ್ಗೆ ಮಾತಾಡುತ್ತಲೂ, ಮತ್ತೊಮ್ಮೆ ಚಂಪಾ-ಚಪಲೆಯರನ್ನು ಪ್ರಸನ್ನೀಕರಿಸುವದಕ್ಕೋ ಸುಗ ಅವರನ್ನು ನಗೆ ಮಾತುಗಳಿಂದ ರಮಿಸುತ್ತಲೂ ಅತ್ತಿತ್ತ ಅಲೆ ದಾಡುತ್ತಿದ್ದಾಳೆ

ಚಂಪಾ-ಚಪಲೆಯರು ಇಂದು ನಿರ್ಮಲ ಮನಸ್ಸಿನಿಂದ ತಮ್ಮ ತಮ್ಮಲ್ಲಿ ಸಂಭಾಷಣ ನಡೆಸಿರುವದನ್ನು ನೋಡಿದ ಮನೆಯ ಒಡ ತಿಯು, ಕೆಳಗೆ ಹೋಗಿ ಸಾಧುಸಿಂಹನನ್ನು ಕುರಿತು:— ''ಸಾಧೂ,

ದರ್ಶನನು ಬಹು ದೈವವಂತನು ನೋಡು! ಚಪಲೆಯು ಲಖನೌಕ್ಕೆ ಬರಲಿಕ್ಕೆ ಎಂದೂ ಸಮ್ಮತಿಸಲಾರಳೆಂದು ನಾನು ಮಾಡಿದ್ದೆನು; ಆದರೆ ಈ ದಿನ ಅವಳ ಲಕ್ಷಣವು ಬಹು ಸೋಜಿಗವಾಗಿ ತೋರುತ್ತದೆ! ನೀವು ಇಲ್ಲಿ ಬಂದಂದಿನಿಂದ ಅವಳ ಚಂಡಿಸ್ವಭಾವವೂ, ಬಡಬಡಿಕೆಯೂ ಕಡಿಮೆಯಾಗಿರುತ್ತದೆ. ಸಾಧೂ, ಏನು ಹೇಳಲಿ? ಈ ರಕ್ಕಸಿಯು ಹಗಲಿರುಳು ತ್ರಾಸ ಕೊಟ್ಟು, ನನ್ನನ್ನು ತೀರಾ ಗೋಳಾಡಿಸಿ ಬಿಟ್ಟಿರುವಳು. ಇವಳ ಚೀರಾಟ-ಒದರಾಟಗಳನ್ನೂ, ಬಡಬಡಿಕೆಗಳನ್ನೂ ಕೇಳಿ ಕೇಳಿ, ಬೇಸತ್ತು ಹೋಗಿದ್ದೆನು. ನನ್ನನ್ನು ನೋಡಿದ ಕೂಡಲೆ ಇವಳ ಮೈಯು ಉರಿಯುತ್ತಿತ್ತು! ನಾನೆಂದರೆ, ಇವಳಿಗೆ ಒಂದು ಭಯಂಕರ ಹುಲಿಯಂತೆ ಕಾಣುತ್ತಿದ್ದೆನೋ ಏನೋ, ದೇವರೇಬಲ್ಲ! ಹೀಗಿದ್ದು, ಇಂದಿನ ರೀತಿಯು ಬೇರೆಯಾಗಿದೆ ನನ್ನ ಚಂಪೆಯು ಈಕೆಯ ಮನಸ್ಸನ್ನು ತಿರುಗಿಸಿದಂತೆ ತೋರುತ್ತದೆ ಚಂಪೆಯು ಮಾತ್ರ ಬಹು ಸಭ್ಯ ಹುಡಿಗೆಯು! ಚನ್ನಾಗಿ ಹಾಡಲಿಕ್ಕೂ, ಬಾರಿಸಲಿಕ್ಕೂ ಕಲಿತಿರುವಳು. ಪರಮೇಶ್ವರನ ಕೃಪೆಯಿಂದ ಚಂಪೆಯು ಬಾದಶಹನ ಮನಸ್ಸಿಗೆ ಬಂದರೆ ತೀರಿತು; ಇಷ್ಟು ದಿವಸಗಳ ವರೆಗೆ ಮಾಡಿದ ಶ್ರಮದ ಸಾರ್ಥಕವಾದಂತಾಗುವದು; ಮತ್ತು ದರ್ಶನನು ಬಾದಶಹನ ಮಂತ್ರಿಯಾಗುವನು "

ವಾಚಕವೃಂದ! ಚಪಲೆಯು ಇಂದಿನ ವರೆಗೆ ಸ್ವಸಂತೋಷದಿಂದ ತನ್ನ ಊಟವನ್ನು ಎಂದೂ ಮಾಡಿಕೊಂಡಿದ್ದಿಲ್ಲ; ಕರಳು ತುಂಬ ಎಂದೂ ಉಂಡಿದ್ದಿಲ್ಲ. ಚಂಪೆಯು ಬಹಳ ಆಗ್ರಹವನ್ನು ಮಾಡಿದರೆ ಮಾತ್ರ, ಏನಾದರೂ ತುಸು ಆಹಾರವನ್ನು ತೆಗೆದುಕೊಳ್ಳುತ್ತಿದ್ದಳು. ಒಮ್ಮೊಮ್ಮೆ ಎರಡು-ಮೂರು ದಿವಸಗಳ ವರೆಗೆ ಒಂದು ಅಗಳನ್ನು ಸಹ ಅವಳು ಮುಟ್ಟುತ್ತಿದ್ದಿಲ್ಲ. ಮುದಕಿಯು ಮುಟ್ಟಿದ ನೀರನ್ನು ಕುಡಿಯುವದೊತ್ತಟ್ಟಗಿರಲಿ; ಕೈಯಿಂದ ಸಹ ಹಿಡಿಯುತ್ತಿದ್ದಿಲ್ಲ ಮುದಕಿಯನ್ನು ಅವಳು ಮನಃಪೂರ್ವಕ ತಿರಸ್ಕರಿಸುತ್ತಿದ್ದಳು. ಇಷ್ಟೇ ಅಲ್ಲ; ಈ ಎರಡು ವರುಷಗಳ ವರೆಗೆ ಮುದಕಿಯ ಸಂಗಡ ಒಮ್ಮೆಯಾದರೂ ಮನಬಿಚ್ಚಿ ಮಾತಾಡಿದ್ದಿಲ್ಲ.

ಆದರೆ ಇಂದು ತಾವಾಗಿಯೇ ಚಂಪಾ-ಚಪಲೆಯರು ತಮ್ಮ ಊಟದ ವ್ಯವಸ್ಥೆಯಲ್ಲಿ ತೊಡಗಿರುವದನ್ನು ನೋಡಿ, ಮುದಕಿಗೆ

ಬಹು ಸಮಾಧಾನವಾಯಿತು. ಚಂಪೆಯು ಚಪಲೆಯ ಮನಸ್ಸನ್ನು ತಿರುಗಿಸಿ, ಬಾದಶಹನ ವಿಲಾಸದಾಸಿಯಾಗುವದಕ್ಕೆ ಒಡಂಬಡಿಸಿರುವಳೆಂದು ತಿಳಿದು, ಹಲ್ಲು ಬಿದ್ದ ಒಡಕ ಕಲ್ಲಪರಟೆಯಂತಾದ ಬಾಯಿಯನ್ನು ತೆರೆದು ಮುದಕಿಯು ಅನ್ನುತ್ತಾಳೆ:—"ಬೇಟಾ-ಚಪಲಾ! ಈಗಾದರೂ ನಿನಗೆ ತಿಳಿಯಿತಷ್ಟೇ? ಚಂಪೆಯು ಎಲ್ಲವನ್ನೂ ತಿಳಿಸಿ ಹೇಳಿದಂತೆ ತೋರುತ್ತದೆ. ಲಖನೌಕ್ಕೆ ಹೋದ ಮೇಲೆ ನೀವೀರ್ವರೂ ಬಾದಶಹನ ಮುಂದೆ ಹೋಗಬೇಕಾಗುವದು. ಬಾದಶಹನ ದೃಷ್ಟಿಯು ನಿಮ್ಮ ಮೇಲೆ ಒಮ್ಮೆ ಬಿದ್ದರೆ ತೀರಿತು; ಆ ಮೇಲೆ ಕೇಳುವದೇನು? ನಿಮ್ಮ ಭಾಗ್ಯಸೂರ್ಯನು ಉದಯಿಸಿದನೆಂದೇ ತಿಳಿಯಬೇಕು! ನಿಮ್ಮ ಮೇಲೆ ಮುತ್ತು-ರತ್ನಗಳ ಮಳೆಗರೆಯಿತೆಂತಲೇ ತಿಳಿಯಬೇಕು! ಇಡಿ ಜಗತ್ತಿನಲ್ಲಿ ದುರ್ಲಭವಾದ ವಸ್ತ್ರಾಭರಣಗಳು ನಿಮಗೆ ವೆಗ್ಗಳವಾಗಿ ದೊರೆಯುವವು. ಬಾದಶಹನೇ ನಿಮ್ಮ ಮಾತನ್ನು ಲಾಲಿಸುವದಕ್ಕೆ ಕೈಕಟ್ಟಿಕೊಂಡು ನಿಂತಿರುವ ಸಮಯದಲ್ಲಿ, ನೂರಾರು ದಾಸ-ದಾಸಿಯರು ಕೈ ಜೋಡಿಸಿ ನಿಲ್ಲುವದೇನಾಶ್ಚರ್ಯವು! ನಿಮಗೆ ದೊರೆಯತಕ್ಕ ವೈಭವವನ್ನು ವರ್ಣಿಸುವದು ಸರ್ವತೋಪರಿ ಅಶಕ್ಯವೇ ಸರಿ! ಬೇಟಾ, ಮನಸ್ಸು ಸ್ಥಿರವಿರಲಿ. ಸ್ವಲ್ಪವೂ ಹೆದರಬಾರದು. ನಾಳೆ ಮುಂಜಾವಿನಲ್ಲಿಯೇ ನಾವೆಲ್ಲರೂ ಇಲ್ಲಿಂದ ಹೊರಡೋಣ."

ವೃದ್ಧಳ ಭಾಷಣವನ್ನು ಕೇಳಿ, ಚಪಲೆಗೆ ನೂರಾರು ಚೇಳುಗಳು ಒಮ್ಮಿಂದೊಮ್ಮೆ ಕಚ್ಚುತ್ತಿರುವಂತೆ ವೇದನೆಯಾಗತೊಡಗಿತು. ಅವಳ ಹೃದಯವು ಸಾವಿರಾರು ಹೋಳಾಯಿತು. ಮನದಲ್ಲಿ ಉದ್ಭವಿಸಿದ ಕೋಪಾಗ್ನಿಯನ್ನು ಹತ್ತಿಕ್ಕಿ, ಅವಳು ಕೆಳಗೆ ಮೋರೆ ಮಾಡಿಕೊಂಡು ಸುಮ್ಮನೆ ಕುಳಿತಳು; ಆದರೆ ನೇತ್ರಗಳಿಂದ ದಳದಳ ಸುರಿಯುವ ಕಂಬನಿಗಳನ್ನು ತಡೆದು ನಿಲ್ಲಿಸುವದು ಮಾತ್ರ ಅವಳ ಕೈಯಿಂದಾಗಲಿಲ್ಲ. ಎಷ್ಟೋ ಹೊತ್ತಿನ ವರೆಗೆ ಅಶ್ರುಪ್ರವಾಹವು ಒಂದೇಸವನೆ ಸಾಗಿತ್ತು. ಆಗ ಚಪಲೆಯು ಮನದಲ್ಲಿಯೇ ಅನ್ನುತ್ತಾಳೆ:—"ಈ ಚಾಂಡಾಲಿನಿಯು ಐಶ್ವರ್ಯದ ಲೋಭದಿಂದ ನನ್ನ ಮನವನ್ನು ತಿರುಗಿಸಲಿಕ್ಕೆ ಯತ್ನಿಸುತ್ತಾಳೆ; ಆದರೆ ಈ ದುಷ್ಟಳಿಗೆ-ಪಾಪಿಷ್ಠಳಿಗೆ- ಈ ಮಾನಕುಮಾರಿಯ ಸತ್ವವು ತಿಳಿದಿಲ್ಲೆಂಬಂತೆ

ತೋರುತ್ತಿದೆ? ದುಷ್ಟೇ, ಅಯೋಧ್ಯೆಯ ಬಾದಶಹನ ಸಾಮ್ರಾಜ್ಯ ವನ್ನಷ್ಟೇ ಅಲ್ಲ; ಇಡಿ ತ್ರಿಭುವನದಲ್ಲಿಯ ಅಖಿಲೈಶ್ವರ್ಯವನ್ನು ಅರ್ಪಿಸಿದರೂ ಸಹ ಈ ಮಾನಕುಮಾರಿಯ ಚಿತ್ತವು ಒಂದು ಕ್ಷಣ ಮಾತ್ರವೂ ಪ್ರಿಯಪತಿಯ ಚರಣದಿಂದ ಚಲಿಸಲಾರದು ಕಂಡೆಯಾ?''

ಬಾದಶಹನ ಅಪಾರ ಐಶ್ವರ್ಯದ ವರ್ಣನೆಯನ್ನು ಮುದಕಿಯು ಮಾಡುತ್ತಿರುವಾಗ ಮಾನಕುಮಾರಿ(ಚಪಲೆ)ಯು ಪ್ರಿಯ ಪತಿಯ-ಅಯೋಧ್ಯಾನಾಥನ ಚರಣಸ್ಮರಣವನ್ನು ಮಾಡುತ್ತಿದ್ದಳು. ಮಾನಕುಮಾರಿಯು ಸುಮ್ಮನೆ ತನ್ನ ಭಾಷಣ ಕೇಳುತ್ತಿರುವದನ್ನು ನೋಡಿ, ಅವಳು ಮತ್ತಿಷ್ಟು ಹರುಷಗೊಂಡು ಪುನಃ ತನ್ನ ನಾಗ್ಯಂ ತ್ರಕ್ಕೆ ಕೀಲಿಗುನ್ನು ಕೊಟ್ಟಳು:—''ಬೇಟಾ, ಹೀಗೆ ಎಂದಾದರೂ ನಾಚುವರೇ? ಬಾದಶಹನ ದರ್ಬಾರದಲ್ಲಿ ಹೀಗೆ ನಾಚಿದರೆ ಮುಂದೆ ಗತಿಯೇನು? ಅಲ್ಲಿ ನಿನಗೆ ಯಾರಾದರೂ ವಿನೋದದಿಂದ ಏನಾ ದರೂ ಮಾತಾಡಿದರೆ, ನೀನಾದರೂ ವಿನೋದದಿಂದಲೇ ಪ್ರತ್ಯುತ್ತರ ವನ್ನು ಕೊಡಲಿಕ್ಕೆ ಬೇಕು. ಯಾರಾದರೂ ಚೇಷ್ಟೆಯನ್ನು ಮಾಡಿ ದರೆ, ನೀನಾದರೂ ಚೇಷ್ಟೆಯಿಂದಲೇ ಅವರನ್ನು ನಿರುತ್ತರರನ್ನಾಗಮಾ ಡಬೇಕು ಚಂಪಾ, ನೀನೂ ನಾಚತಕ್ಕವಳೇನು! ಹುಚ್ಚಿ, ಧಿಟ್ಟತನ ದಿಂದ ಮಾತು-ಕಥೆಗಳನ್ನಾಡಲಿಕ್ಕೆ ತುಸ ಕಲಿ, ತಿಳಿಯಿತೇ?''

ಮುದಕಿಯ ಮಾತಿಗೆ ಚಪಲೆಯು ಸಿಟ್ಟು ಬೆಂಕಿಯಾದಳು; ಆದರೆ ಬಹಿರಂಗದಲ್ಲಿ ಅದನ್ನು ತೋರ್ಪಡಿಸಲಿಲ್ಲ. ಬಳಿಕ ಮುದ ಕಿಯು ಎದ್ದು ಹೋಗಲು, ಚಂಪಾ-ಚಪಲೆಯರು ಊಟ ಮಾಡಿ, ತಮ್ಮ ಕೋಣೆಗೆ ಮಲಗುವದಕ್ಕೆಂದು ಹೋದರು. ಅವರು ಅಲ್ಲಿ ಬಹಳ ಹೊತ್ತಿನ ವರೆಗೆ ತಾವು ಪಾರಾಗುವ ಯೋಚನೆಯನ್ನು ಮಾಡಿ, ಯಾವದೂ ಬಗೆ ಹರಿಯದೆ, ಸದ್ಯಕ್ಕೆ ಲಖನೌಶಹರಕ್ಕೆ ಹೋಗಬೇಕು. ಅಲ್ಲಿ ತಮ್ಮ ಮಾನರಕ್ಷಣೆಯಾಗದೆಂದು ಕಂಡು ಬಂದರೆ, ಆತ್ಮಹತ್ಯೆ ಮಾಡಿಕೊಳ್ಳಬೇಕು, ಎಂದು ನಿರ್ಧರಿಸಿದರು ಆತ್ಮಹತ್ಯೆಯನ್ನು ಯಾತರಿಂದ ಮಾಡಿಕೊಳ್ಳಬೇಕೆಂಬ ಬಗ್ಗೆ ಅವರಲ್ಲಿ ಬಹಳ ಹೊತ್ತಿನ ವರೆಗೆ ಆಲೋಚನೆಯು ನಡೆಯಿತು.

ಕೆಲಹೊತ್ತು ಇಬ್ಬರೂ ಸುಮ್ಮನೆ ಕುಳಿತರು. ಆತ್ಮರಕ್ಷಣೆಯ ವಿಚಾರದ ವೇಳೆಯು ಸ್ವಲ್ಪವೇ ಉಳಿಯಿತು. ಆಗ ಚಪಲೆಯು:—

"ಎಲ್ಲಿಯಾದರೂ ಸೂಕ್ಷ್ಮ ಖಂಜೀರ(ಜಂಬಿಯಾ)ಗಳು ಸಿಗಬಹುದೇನು?"

"ಅವು ಶೀಘ್ರರೂ ಸಿಗಬಹುದು; ಆದರೆ ಅವನ್ನು ನಾವು ಎಲ್ಲಿ ಇಟ್ಟುಗೊಳ್ಳಬೇಕು?"

"ತಲೆಗೂದಲುಗಳಲ್ಲಿ ಮುಚ್ಚಿ ಇಡಬೇಕು. ನಿನ್ನ ಹತ್ತಿರ ಅವೆಯೋ ಹೇಗೆ?"

"ಅವೆ!"

"ಈಗ ಸದ್ಯಕ್ಕೆ ತಗೊಂಡು ಬರುತ್ತೀಯೋ?"

"ಹೂ! ತಗೊಂಡು ಬರುತ್ತೇನೆ."

"ಹೋಗು ಹಾಗಾದರೆ; ಬಹು ಸೂಕ್ಷ್ಮ ಅಲಗುಳ್ಳ ಖಂಜೀರಗಳನ್ನು ತೆಗೆದುಕೊಂಡು ಬಾ."

ಕೂಡಲೆ ಚಂಪೆಯು ತನ್ನ ಕೋಣೆಯಲ್ಲಿ ಹೋಗಿ, ಎರಡು ಖಂಜೀರಗಳನ್ನು ಚಪಲೆಯ ಕೈಯಲ್ಲಿ ತಂದು ಕೊಟ್ಟಳು ಅವುಗಳನ್ನು ಲಕ್ಷ್ಯಪೂರ್ವಕ ನೋಡಿ ಚಪಲೆಯು: "ಖಂಜೀರಗಳು ಮಾತ್ರ ಉತ್ತಮವಿದ್ದು, ತುದಿಗಳು ಬಲು ಹದನವಿರುತ್ತವೆ ಪ್ರಸಂಗವೊದಗಿದಲ್ಲಿ ಎದೆಯಲ್ಲಿ ಚುಚ್ಚಿಕೊಂಡು ಪ್ರಾಣ ತ್ಯಜಿಸಲಿಕ್ಕೆ ಅಡ್ಡಿಯಿಲ್ಲ. ಚಂಪಾ, ನನ್ನ ಕೂದಲುಗಳಲ್ಲಿ ಒಂದು ಬಚ್ಚಿಟ್ಟು ಮೊದಲು ನನಗೆ ಹೆರಳು ಹಾಕು ಹಿಂದಿನಿಂದ ನಿನಗೆ ನಾನು ಹಾಕುತ್ತೇನೆ."

ಕೌರವರಾಜನ ಸಭೆಯಲ್ಲಿ ದುಃಶಾಸನನಿಂದ ಅವಮಾನಿತಳಾದ ದ್ರೌಪದಿಯು ಭೀಷ್ಮಪ್ರತಿಜ್ಞೆಯಂಗೈದು, ತಲೆಕೂದಲುಗಳನ್ನು ಬಿಚ್ಚಿಬಿಟ್ಟಂತೆ ಚಪಲೆ(ಮಾನಕುಮಾರಿ)ಯು ತನ್ನ ಕೇಶಭಾರವನ್ನು ಬಿಚ್ಚಿಬಿಟ್ಟಿದ್ದಳು. ಆ ಸತೀಮಣಿಯು ಲಂಕೆಯಲ್ಲಿಯ ಸೀತಾಮಾತೆಯಂತೆ ಒಬ್ಬರ ಕಡೆಯಿಂದಲೂ ತನ್ನ ಕೇಶ ರಚನೆಯನ್ನು ಮಾಡಗೊಟ್ಟಿದ್ದಿಲ್ಲವಾದ್ದರಿಂದ, ಅವಳ ಸುದೀರ್ಘ ಕೇಶರಾಶಿಯು ಕಾಂತಿಹೀನವಾಗಿತ್ತು. ಚಂಪೆಯು ಎಣ್ಣೆಯನ್ನು ಹಚ್ಚಿ, ಚನ್ನಾಗಿ ಹಣಿಗೆಯಿಂದ ಹಿಕ್ಕಿ ಅದರಲ್ಲಿ ಒಂದು ಖಂಜೀರವನ್ನು ಬಚ್ಚಿಟ್ಟಳು. ಅನಂತರ ಚಪಲೆಯು ಚಂಪೆಯ ಕಪ್ಪನ್ನ ಕೂದಲುಗಳನ್ನು ಹಿಕ್ಕತೊಡಗಿದಳು. ಕೂದಲುಗಳನ್ನು ಹಿಕ್ಕುವಾಗ ಚಂಪೆಯ ತಲೆಯಲ್ಲಿ ಸುಮಾರು ಎರಡು ಅಂಗುಲ ಅಗಲುಳ್ಳ ಕಲೆಯಿರುವದು

ಅವಳ ದೃಷ್ಟಿಗೆ ಬಿತ್ತು. ಆಗ ಅವಳು ಆ ಕಲೆಯ ಮೇಲೆ ತನ್ನ ಬೆರಳುಗಳನ್ನಿಟ್ಟು: "ಚಂಪಾ, ನಿನ್ನ ತಲೆಯ ಮೇಲಿನ ಈ ಕಲೆಯು ಹ್ಯಾತರದು? ಇದೊಂದು ದೊಡ್ಡ ಶಸ್ತ್ರದ ಕಲೆಯಂತೆ ತೋರುತ್ತದೆ!"

"ನಾನು ಇಲ್ಲಿಗೆ ಬರುವದಕ್ಕಿಂತ ಮೊದಲಿನಿಂದಲೇ ಈ ಕಲೆಯು ಇರುತ್ತದೆ. ನಾನು ತೀರ ಚಿಕ್ಕವಳಿರುವಾಗ, ನನ್ನನ್ನು ಆಡಿಸುತ್ತಿರುವಂಥ ಸ್ತ್ರೀಯ ತೊಡೆಯ ಮೇಲಿಂದ ಕಟ್ಟೆಯ ಕೆಳಗೆ ಬಿದ್ದು, ಈ ನೋವಾದದ್ದು ನನಗೆ ತುಸ ತುಸ ನೆನಪಿದೆ. ಕಟ್ಟೆಯ ಕೆಳಗಿರುವ ಕಲ್ಲು ಬಲು ಬಿರುಸಿನಿಂದ ಬಡೆದದ್ದರಿಂದ ದೊಡ್ಡ ತೂತು ಬಿದ್ದು, ಬಹಳ ರಕ್ತಸ್ರಾವವಾಯಿತು. ಈ ಕಲೆಯು ಅದರದೇ, ಶಸ್ತ್ರದ್ದಲ್ಲ!"

ಚಂಪೆಯ ಭಾಷಣವನ್ನು ಕೇಳಿ ಚಪಲೆಯು ಎಷ್ಟೋ ಹೊತ್ತಿನ ವರೆಗೆ ಅವಳ ಮುಖವನ್ನು ಸ್ಥಿರ ನೋಟದಿಂದ ನೋಡ ಹತ್ತಿದಳು. ಚಪಲೆಯ ಮನದಲ್ಲಿ ಸೋಜಿಗದ ಅಲ್ಪ-ಸ್ವಲ್ಪ ಆನಂದದ ಸಂಗತಿಗಳು ನಡೆದಿರುವವೆಂದು ಯಾರಿಗಾದರೂ ತಟ್ಟನೆ ಹೊಳೆಯುತ್ತಿತ್ತು. ಹೀಗೆ ಸಾಶ್ಚರ್ಯದ ನೋಟದಿಂದ ತನ್ನ ಕಡೆಗೆ ನೋಡುವ ಚಪಲೆಯನ್ನು ಕುರಿತು ಚಂಪೆಯು ಅನ್ನುತ್ತಾಳೆ: "ಏನೇ, ಹೀಗೇನು ನೋಡುವೆ? ನಿನ್ನ ಮನದಲ್ಲಿ ನಡೆದ ವಿಚಾರವಾದರೂ ಏನು?"

ಆದರೂ ಚಪಲೆಯು ಹಿಂದು ತುಟಿಯನ್ನು ಎರಡು ಮಾಡದೆ. ತನ್ನ ಕ್ರಮವನ್ನು ನಡಿಸಿಯೇ ಇದ್ದಳು. ಚಂಪೆಯು ಪುನಃ ಮೇಲಿನ ಪ್ರಶ್ನೆಯನ್ನೇ ಮಾಡಲು, ಅವಳು:—"ಚಂಪಾ, ಇಲ್ಲಿ ಬರುವದಕ್ಕಿಂತ ಮೊದಲಿನ ಸಂಗತಿಯು ಏನಾದರೂ ನಿನ್ನ ಸ್ಮರಣದಲ್ಲಿರುವದೋ?"

"ಇಲ್ಲ, ನನಗೆ ನೆನಪಿಲ್ಲ! ನಾನು ಚಿಕ್ಕವಳಿರುವಾಗ ಹಬ್ಬ ಸಾದುಗಪ್ಪಾದ ಸ್ತ್ರೀಯು ನನ್ನ ಮೇಲೆ ಬಹಳ ಪ್ರೇಮವನ್ನು ಮಾಡುತ್ತ, ಯಾವಾಗಲೂ ಆಡಿಸುತ್ತಿದ್ದದ್ದು ಮಾತ್ರ ನನ್ನ ನೆನಪಿನಲ್ಲಿದೆ. ಚಪಲಾ, ಇಲ್ಲಿ ಬಂದ ಮೇಲೆಯಾದರೂ ನನಗೆ ಆ ಸ್ತ್ರೀಯ ನೆನಪಾಗಿ ದುಃಖವೆನಿಸುತ್ತಿತ್ತು. ಈಗಾದರೂ ಅವಳ ಸಲುವಾಗಿ ವ್ಯಸನವಾಗುತ್ತದೆ (ಚಂಪೆಯ ಕಂಬನಿಗಳುದುರಹತ್ತಿದವು)

ಚಪಲೆಯು ಸ್ಥಿರನೋಟದಿಂದ ಕಣ್ಣುರೆಪ್ಪೆಯನ್ನು ಸಹ ಬಡೆ

ಯದೆ ಹಿಂದೇಸವನೆ ಚಂಪೆಯು ಮುಖದ ಕಡೆಗೆ ನೋಡುತ್ತ ಮನದಲ್ಲಿಯೇ ಏನೇನೋ ಗಂಭೀರ ವಿಚಾರಗಳನ್ನು ಮಾಡುತ್ತಿದ್ದಳು. ಅವಳ ಮನದಲ್ಲಿ ವಿಚಾರತರಂಗಗಳು ತಾಕಲಾಡುತ್ತಿರಲು, ಚಂಪೆಗೆ ಅದರ ಮರ್ಮವೇ ತಿಳಿಯಲಿಲ್ಲ ತಿಳಿಯುವ ಬಗೆಯಾದರೂ ಹೇಗೆ? ಆಗ ಅವಳು ಚಪಲೆಯನ್ನು ಕುರಿತು:— "ಚಪಲಾ, ಹೀಗೇನು ಮಾಡುವೆ? ನಿನ್ನ ಮನದಲ್ಲಿ ನಡೆದ ವಿಚಾರವಾದರೂ ಏನು?"

"ನಿನ್ನ ಎದೆಯ ಮೇಲೆ ಮೂರು ಕರ್‍ರಗಿನ ಗೆರೆಗಳು ಇರುವವೇನು?"

"ಇವೆ;—ಆದರೆ—ಹೀಗೇಕೆ ಕೇಳುವೆ?"

ಚಂಪೆಯ ಮೇಲಿನ ಪ್ರಶ್ನೆಗೆ ಚಪಲೆಯು ಏನೂ ಉತ್ತರವನ್ನು ಕೊಡದೆ ಅವಳ ಎದೆಯ ಮೇಲಿನ ಸೆರಗನ್ನು ತನ್ನ ಕಂಪ್ಪ ಹಸ್ತದಿಂದ ತೆಗೆದಳು ಆಗ ಚಂಪೆಯ ಹೃದಯ ಪ್ರದೇಶದಲ್ಲಿ ಮೂರು ಕಪ್ಪಾದ ಗರೆಗಳು ಅವಳ ನೋಟಕ್ಕೆ ಬಿದ್ದವು. ಕೂಡಲೆ ಆನಂದದಿಂದ:—"ಸೀತಾಪತೇ, ರಾಮಾ! ನಿನ್ನ ಲೀಲೆಯು ಅಗಾಧ ನಿಜ!" ಎಂದು ನುಡಿದು, ಮತ್ತೆ ವಿಚಾರಮಗ್ನಳಾದಳು; ಆಗಂತೂ ಚಂಪೆಯು ಮತ್ತಿಷ್ಟು ಗೊಂದಲದಲ್ಲಿ ಬಿದ್ದಳು! ಇವಳಿಗೇನು ಹುಚ್ಚು ಹಿಡಿಯಿತೋ, ಭ್ರಾಂತಿಯಾಯಿತೋ ಎಂಬ ವಿಕಲ್ಪವು ಆ ಅಜ್ಞ ಬಾಲಿಕೆಯ ಮನದಲ್ಲಿ ಬರದೆ ಹೋಗಲಿಲ್ಲ ಆಗ ಅವಳು ಮತ್ತಿಷ್ಟು ಅಧೀರಳಾಗಿ:-"ಸಖಿ, ನಿನ್ನಲ್ಲಿ ಅದೆಂಥ ವಿಚಾರವು ನಡೆದಿರುವದು? ನನ್ನ ಮುಂದೆ ಹಿಮ್ಮೆಯಾದರೂ ಹೇಳಬಾರದೇ?"

ಬಹಳ ಹೊತ್ತು ವಿಚಾರ ಮಾಡಿದ ಬಳಿಕ ಹಿಂದು ದೀರ್ಘ ನಿಟ್ಟುಸಿರು ಬಿಟ್ಟು:— "ಚಂಪಾ! ಆ ದಯಾಘನನಾದ ಪರಮೇಶ್ವರನ ಲೀಲೆಯು ಅತ್ಯಗಾಧವು! ಆಶ್ಚರ್ಯವು! ಆ ಲೀಲಾಧಾರಿಯ ಅಗಮ್ಯಲೀಲೆಯು ಮನುಷ್ಯ ಮಾತ್ರರಿಗೆ ಎಂದೂ ತಿಳಿಯಲಾರದು!! ಚಂಪಾ! ಇಂದು ನನಗೆ ಕಳಕೊಂಡ ರತ್ನವು ಸಿಕ್ಕಿತು; ಮೀನ ನುಂಗಿದ ಮಾಣಿಕವು ದೊರೆಯಿತು; ತಿಪ್ಪೆಯಲ್ಲಿ ಬಿದ್ದು ಅಡಗಿಹೋಗಿದ್ದ ವಜ್ರದ ಹರಳು ಸಿಕ್ಕಿರುವದು; ಶಕ್ಕರ ಸ್ವಾಧೀನವಾದ ದುರ್ಮಿಳ ವೈಢೂರ್ಯವು ಲಭಿಸಿತು!"

ಚಂಪೆಗೆ ಈ ಆನಂದೋದ್ಗಾರಗಳ ಗುಟ್ಟು ಹೊಳೆಯಲಿಲ್ಲ.

ಒ. " ಅತ್ಯಂತ ಆನಂದವಾಗಬೇಕಾದರೆ, ಅಂಥ ನಿಜವಾದ ಕಾರಣ ವಾ..ರೂ ಇರಲಿಕ್ಕೆ ಬೇಕು; ಇಲ್ಲವಾದರೆ, ಮುಂದಿನ ಸಂಕಟದ ವಿ..ಕಾರಗಳಿಂದ ಮಿದುಳು ಅಸ್ಥಿರವಾಗಿ ಇವಳು ಭ್ರಾಂತಿಷ್ಟಳಾಗಿರ ಬೇಕು; ಇವುಗಳಲ್ಲಿ ಮೊದಲಿನ ಕಾರಣವು ನಿಜವಿರಲಿಕ್ಕಿಲ್ಲೆಂದು ..ಗಾದರೂ ಹೊಳೆಯುವದು ಸ್ವಾಭಾವಿಕವೇ ಸರಿ. ಆದರಂತೆ ..ಯೂ ತಿಳಿದು:—"ಚಪಲಾ, ನಿನಗೆ ಹುಚ್ಚು-ಗಿಚ್ಚು ಹಿಡಿ ..ಲ್ಲ ಹೇಗೆ? ನೀನು ಕಳಕೊಂಡ ರತ್ನವು ಯಾವದು? ದೊರಿತ ..ಣಿಕವೆಲ್ಲಿರುವದು? ತಿಪ್ಪೆಯಲ್ಲಿ ಅಡಗಿದ ಹರಳು ಅಂದರೇನು? ನಿ.. ಸಿಕ್ಕ ವೈಢೂರ್ಯವು ಹೇಗೆ ಅದೆ? ಎಲ್ಲಿ ಅದೆ?—" ಎಂದು ..ದೋಷವನೆ ಪ್ರಶ್ನೆಗಳ ಮಾಲಿಕೆಯನ್ನೇ ಸುರಿಸಹತ್ತಿದಳು.

"ಚಂಪಾ! ನನಗೆ ರತ್ನವು ಸಿಕ್ಕದ್ದು ನಿಜವಿರುತ್ತದೆ. ನನ್ನ ಮಾ..ಣಿಕವು ಇಲ್ಲೇ ಇದೆ. ನನಗೆ ಹುಚ್ಚು ಹಿಡಿದಿಲ್ಲ."

"ನಿನ್ನ ರತ್ನವು ಎಲ್ಲಿ ಇರುತ್ತದೆ?"

"ಚಂಪಾ! ನೀನೇ ನನ್ನ ರತ್ನವು; ನೀನೇ ಮಾಣಿಕವು; ನೀನೇ ಕ..ಂಹೋದ ವಜ್ರದ ಹರಳು; ಮತ್ತು ನೀನೇ ಠಕ್ಕರ ಸ್ವಾಧೀನ ವಾದ ವೈಢೂರ್ಯವು!"

ಸೋಜಿಗವೆಂಬ ಬಿರುಗಾಳಿಯಿಂದ ಅಂತರದಲ್ಲಿಯೇ ಹಾರಾ ..ತ್ತಿರುವ ಚಂಪೆಯು ಅತ್ಯಾತುರತೆಯಿಂದ:— "ಅದು ಹೇಗೆ?"

"ಚಂಪಾ! ನಿನ್ನ ಮುಖವೂ ಹಲ್ಲುಗಳೂ ನನ್ನ ಪ್ರಿಯಕರರಂತೆ ಇ..., ನಿನ್ನ ನಡೆ-ನುಡಿಗಳು ಸಹ ಅವರಂತೆಯೇ ಇರುತ್ತವೆ! ನಿನ್ನ ಸ..ವಾಸದಲ್ಲಿ ಈಗೆರಡು ವರುಷಗಳಿಂದ ಇದ್ದರೂ, ಇದೆಲ್ಲ ಇಂದೇ ನನ್ನ ಮನದಲ್ಲಿ ಮೊದಲು ಬಂತು. 'ತಂದೆಯದೂ, ಸಂಗಡ ಇದ್ದ ದಾ..ಯದೂ ಪ್ರೇತಗಳು ಸಿಕ್ಕಿದ್ದವು; ಆದರೆ ತಂಗಿಯ ಪ್ರೇತವು ಮಾತ್ರ ಸಿಗಲಿಲ್ಲ'ಂದು ಅವರು ಮೇಲಿಂದ ಮೇಲೆ ಹೇಳುತ್ತಿದ್ದರು. ಮಾ..ನವರನ್ನು ಕೊಂದ ಠಕ್ಕರೇ ಬಹುಶಃ ಹುಡುಗೆಯನ್ನು ತೆಗದು ಕೊಂಡು ಹೋಗಿರಬಹುದೆಂದು ಎಷ್ಟೋ ಸಾರೆ ಅನ್ನುತ್ತಿದ್ದರು. 'ನನ್ನ ತಂಗಿಯ ತಲೆಯ ಮೇಲೆ ಒಂದು ಕಲೆಯಿದ್ದು, ಎದೆಯ ಮೇಲೆ ಮೂರು ಕಪ್ಪಾದ ಗೆರೆಗಳಿರುವವೆ'ಂದು ಅವರು ಒಮ್ಮೆ ನನಗೆ ಹೇಳಿದ್ದರು. ನಿನ್ನ ತಲೆಯ ಮೇಲಿನ ಕಲೆಯನ್ನು ನೋಡಿದ

ಕೂಡಲೆ ನನ್ನ ಮನದಲ್ಲಿ ಇದೆಲ್ಲ ಕಲ್ಪನೆ ಬಂತು. ಅಂತೆಯೇ ನಾನು ನಿನಗೆ ಇಲ್ಲಿ ಬರುವದಕ್ಕಿಂತ ಮೊದಲಿನ ಸಂಗತಿಯು ಏನಾದರೂ ನೆನಪಿರುವದೋ ಹೇಗೆ? ಎಂದು ಕೇಳಿದೆನು.''

"ಇಲ್ಲವ್ವಾ! ನನಗೆ ಏನೂ ನೆನಪಿಲ್ಲ.''

ಚಂಪಾ! ಏನೇ ಇರಲಿ; ನೀನೇ ನನ್ನ ನಾದಿನಿಯು! ಪಿ..ನು ಪತಿಯು ಚಿಕ್ಕ ತಂಗಿಯು! ಇದರಲ್ಲೇನೂ ಸಂಶಯವಿಲ್ಲ. ಈ ... ನಿನ್ನ ಪರಿಚಯವಾದಮೇಲೆ ಹಿಂದೇ ರತ್ನವೇಕೆ? ಮಾಣಿಕವೇಕೆ? ... ರಾರು ಮುತ್ತು-ಮಾಣಿಕಗಳು ಸಿಕ್ಕದ್ದಕ್ಕಿಂತಲೂ ಹೆಚ್ಚು ಆನಂದವು ನನಗಾಗಿದೆ ಚಂಪಾ! ನಿನ್ನ ಬಂಧುವು ನಿನ್ನ ಸಲುವಾಗಿ ಮಾ... ಶೋಕಕ್ಕೆ ನೆಲೆಯಿಲ್ಲ. ಅವರು ದಿವಸದಲ್ಲಿ ನಾಲ್ಕೈದು... ದರೂ ನಿನ್ನ ವಿರಹ ಚಿಂತಾಗ್ನಿಯಿಂದ ಬೇಯುತ್ತಿರ... ಇಂಥ ಸಂಕಟ ಸಮಯದಲ್ಲಿ, ಆ ಸಚ್ಚಿದಾನಂದ ಪರಮೇಶ್ವರನೇ ಈ ಕಳಕೊಂಡಂಥ ಅಮೂಲ್ಯ ನಿಧಿಯನ್ನು ನನಗೆ ದೊರಕಿಸಿಕೊ... ತ್ತಾನೆ. ಹಾಯ್! ನಿನ್ನ ಸಲುವಾಗಿ ಹಗಲಿರುಳು ಅನುತಾ... ಯಿಂದ ಕೊರಗುತ್ತಿರುವ ನಿನ್ನ ಬಂಧುವಿನ ತೊಡೆಯ ಮೇಲೆ ... ಕೈಗಳಿಂದ ನಿನ್ನನ್ನು ಕೂಡ್ರಿಸಿದರೆ, ಚಂಪಾ! ಇಂದಿನ ವರೆಗೆ ... ಸಿದ ಎಲ್ಲ ದುಃಖವನ್ನೂ ಮರೆತುಬಿಡುತ್ತೇನೆ. ಅಂಥ ಸು... ವನ್ನು ನೋಡುವಷ್ಟು ಸುದೈವವು ಈ ದುರ್ದೈವಿಯ... ತೋರುವದಿಲ್ಲ. ನಾಥನ ದರ್ಶನವಾಗುವದಕ್ಕಿಂತ ಪೂರ್ವದಲ್ಲಿ... ನಮ್ಮಿಬ್ಬರಿಗೆ ಆತ್ಮಹತ್ಯೆಯನ್ನು ಮಾಡಿಕೊಳ್ಳುವ ಪ್ರ... ಬರುವದು!''

ಹೀಗೆಂದು ಚಪಲೆಯು ಪ್ರೇಮಾವೇಶದಿಂದ ಚಂಪೆ...ನ್ನು ತಬ್ಬಿಕೊಂಡು ಸ್ನೇಹಾತಿಶಯದಿಂದ ಚುಂಬಿಸಹತ್ತಿದಳು ... ರನ್ನೊಬ್ಬರು ಅವಿರಲವಾಗಿ ಅಪ್ಪಿಕೊಂಡ ಆ ಅತ್ತಿಗೆ-ನಾದಿ... ಬಿಕ್ಕಿ-ಬಿಕ್ಕಿ ಅಳಲಾರಂಭಿಸಿದರು.



## ಸುರಿಮಳೆ.



ವಾಚಕವೃಂದ, ಚಿಕ್ಕಂದಿನಲ್ಲಿ ಮಾತೃವಿಯೋಗ ದುಃಖವೂ, ತಾರುಣ್ಯದಲ್ಲಿ ಪತಿ-ಪತ್ನಿಯರ ವಿಯೋಗದುಃಖವೂ, ವೃದ್ಧಾಪ್ಯದಲ್ಲಿ ಪುತ್ರವಿಯೋಗ ದುಃಖವೂ ಅತ್ಯಂತ ಅಸಹ್ಯವಷ್ಟೇ? ಚಿಕ್ಕಂದಿನಲ್ಲಿಯೇ ಮಾತೃವಿಯೋಗ ದುಃಖವನ್ನು ಹೊಂದಿ, ಮುಂದೆ ಸ್ವಲ್ಪಾವಧಿಯಲ್ಲಿಯೇ ಪಿತೃ-ಭಗಿನಿಯರ ಅಸಹ್ಯ ಶೋಕಸಾಗರದಲ್ಲಿ ಮುಳುಗಿದ್ದ ಅಯೋಧ್ಯಾನಾಥನ ಶೋಕಾನಲವು ಮಾನಕುಮಾರಿಯ ಪ್ರೇಮತುಷಾರಗಳಿಂದ ನಂದತೊಡಗಿತ್ತು; ಆದರೆ ಮಾನಕುಮಾರಿಯ ಅಲೌಕಿಕ ಪ್ರೇಮರಸದಲ್ಲಿ ತನ್ನ ದುಃಖಾನಲವನ್ನು ನಂದಿಸಿಕೊಳ್ಳುವಷ್ಟು ಸುದೈವವು ಅಯೋಧ್ಯಾನಾಥನಿಗಿರದ್ದರಿಂದ, ಆತನ ಶೋಕಾನಲವು ಮಾನಕುಮಾರಿಯ ವಿಯೋಗವೆಂಬ ಬಿರುಗಾಳಿಯಿಂದ ಈಗ ಇಮ್ಮಡಿಸಿತ್ತೆಂದು ಹೇಳಲವಶ್ಯವಿಲ್ಲ.

ಹೀಗೆ ಪ್ರಿಯತಮೆಯ ವಿಯೋಗ ದುಃಖಾಗ್ನಿಯಿಂದ ಬೆಂದು ಬೆಂಡಾದ ಅಯೋಧ್ಯಾನಾಥನು, ತಂಗಿಯ ಮೇಲಿನ ಅತ್ಯಂತ ವಾತ್ಸಲ್ಯದಿಂದ ದಿಙ್ಮೂಢನಾದ ಕಾಶೀನಾಥನೊಡನೆ ಹುಚ್ಚನಂತೆ ದೇಶದೇಶಗಳಲ್ಲಿ ಊರಿಂದೂರಿಗೆ ತಿರುಗಹತ್ತಿದನು ಹೀಗೆ ತಿರುಗುತ್ತಿರುವಾಗ ಅವರಿಗೆ ಚಳಿ-ಗಾಳಿಗಳ, ಶೀತೋಷ್ಣಗಳ, ಅರಿವೆ-ಅಂಚಡಿಗಳ ಅದೇಕೆ? ಹಸಿವೆ-ನೀರಡಿಕೆಗಳ ಪರಿವೆಯು ಸಹ ಇದ್ದಿಲ್ಲ. ಒಮ್ಮೊಮ್ಮೆ ಇಡಿ ರಾತ್ರಿಯನ್ನೆಲ್ಲ ಅಡವಿಯ ಬಟ್ಟಬೈಲಲ್ಲಿ ಬರೇ ಮೈಯಿಂದ ಕಳೆಯಬೇಕಾಗುತ್ತಿತ್ತು. ಒಮ್ಮೊಮ್ಮೆ ಎಂಟೆಂಟು ದಿವಸಗಳ ವರೆಗೆ ಗಡ್ಡೆ-ಗೆಣಸುಗಳನ್ನು ತಿಂದು ಇರುತ್ತಿದ್ದರು; ಆದರೂ ಅವರ ಮನದಲ್ಲಿ ಮಾನಸಿಕ ದುಃಖದ ಪ್ರಾಬಲ್ಯದಿಂದ ಶರೀರ ಕಷ್ಟದ ಕಲ್ಪನೆಯೇ ಇರುತ್ತಿದ್ದಿಲ್ಲ ತರತರದ ಕಷ್ಟಗಳನ್ನು ಪರಿಪರಿಯಿಂದ ಅನುಭೋಗಿಸಿದರೂ, ಅವರು ತಮ್ಮ ದುರ್ದೈವವನ್ನು ಹಳಿಯುತ್ತಿದ್ದರೇ ಹೊರತು, ನಿರಾಶರಾಗುತ್ತಿದ್ದಿಲ್ಲ. ಹೀಗೆ ಅವರು ಎಷ್ಟೋ ದಿವಸಗಳ ವರೆಗೆ ದುಃಖವನ್ನನುಭವಿಸಿದ ಬಳಿಕ, ಅವರಿಗೆ ದರ್ಶನಸಿಂಹನ ಒಬ್ಬ ಹಳೇ ಸೇವಕನಿಂದ ತಿಳಿದದ್ದೇನಂದರೆ:—

“ಮಾನಕುಮಾರಿಯನ್ನು ದರ್ಶನಸಿಂಹನ ಜನರು ತೆಗೆದುಕೊಂಡು

ಹೋಗಿದ್ದು, ಅವಳನ್ನು ಗಾನ-ನರ್ತನಗಳನ್ನು ಕಲಿಸಲಿಕ್ಕೆಂದು ಪಂಜಾಬಕ್ಕೆ ಕಳಿಸಿದ್ದಾರೆ. ಗಾನ-ನರ್ತನಗಳನ್ನು ಕಲಿಯುವದು ಮುಗಿದ ಮೇಲೆ ಅವಳ ಪ್ರವೇಶವು ಬಾದಶಹನ ಝನಾನಖಾನೆಯಲ್ಲಿ ಆಗತಕ್ಕದ್ದಿದೆ.”

‘ಮಾನಕುಮಾರಿಯ ಪ್ರವೇಶವು ಬಾದಶಹನ ಝನಾನಖಾನೆಯಲ್ಲಾಗತಕ್ಕದ್ದಿದೆ’ ಎಂಬ ಅತ್ಯಂತ ಕಠೋರ ಶಬ್ದಗಳು ಅಯೋಧ್ಯಾನಾಥನ ಕಿವಿಯಲ್ಲಿ ಪ್ರವೇಶಿಸಿದ ಕೂಡಲೆ, ತಪ್ತ ಲೋಹ ರಸವನ್ನು ಕಿವಿಯಲ್ಲಿ ಸುರಿದಂತಾಯಿತು. ಆತನ ಹೃದಯಾಗ್ನಿಯು ಘೃತ-ತೈಲಗಳನ್ನು ಆಹುತಿಯಾಗಿ ಇತ್ತ ಅಗ್ನಿಯಂತೆ, ಒಮ್ಮೆಲೆ ಪ್ರಜ್ವಲಿಸಿತು. ಇತ್ತ ಕಾಶಿನಾಥನಿಗಾದರೂ ತಂಗಿಯ ದುಃಸ್ಥಿತಿಯ ಸ್ಸು-ಬಿಭರ್ವಿಷ್ಯವನ್ನು ಕೇಳಿ, ಸಾವಿರಾರು ಚೇಳುಗಳು ಒಮ್ಮೆಲೆ ಕಡಿದಂತೆ ಅಸಹ್ಯ ವೇದನೆಯಾಗತೊಡಗಿತು. ಮುಂದೆ ಸಂಭವಿಸುವ ಅಪಮಾನಾಗ್ನಿಯಿಂದ ಬೆಂದಂತಾಗಿ ಆತನ ಮೋರೆಯು ಕಪ್ಪಿಟ್ಟಿತು; ಆತನು ದಿಙ್ಮೂಢನಾದನು. ಇಂತು ಅಪಮಾನಾಗ್ನಿಯಿಂದ ಬೆಂದವರಾದ ಆ ಇಬ್ಬರೂ ಮಾನಕುಮಾರಿಯ ಶೋಧಕ್ಕೆಂದು ಪಂಜಾಬದ ಮಾರ್ಗವನ್ನು ಹಿಡಿದರು. ಲಾಹೋರ, ಮುಲ್ತಾನ ಮೊದಲಾದ ಅಮೃತಸರ ಮುಂತಾದ ಸ್ಥಳಗಳಲ್ಲಿ ಸೂಕ್ಷ್ಮರೀತಿಯಿಂದ ಹುಡುಕಿದರು. ಆದರೂ ಎಲ್ಲವೂ ವ್ಯರ್ಥವಾಯಿತು.

ಹೀಗೆ ತಂಗಿಯ ಶೋಧವಾಗದ್ದರಿಂದ ಕಾಶೀನಾಥನಿಗೆ ಬಹು ನಿರಾಶೆಯಾಯಿತು. ತಂಗಿಯ ಶೋಕದಿಂದ ಆತನಿಗೆ ಈಗೀಗ ಹುಚ್ಚೇ ಹಿಡಿದಂತಾಗಿತ್ತು. ಪ್ರತಿಯೊಂದು ಕೆಲಸದಲ್ಲಿ ಆತನು ನಿರುತ್ಸಾಹಿಯಾಗಿದ್ದನು. ಇಡಿ ಪಂಜಾಬ ಪ್ರಾಂತವನ್ನೆಲ್ಲ ತಿರುವಿ ಹಾಕಿದರೂ ಮಾನಕುಮಾರಿಯ ಸುಳುವೇ ಹೊಳೆಯದ ಕಾಶೀನಾಥನು; ತಿರುಗಿ ಬರುವಾಗ ಅಯೋಧ್ಯಾನಾಥನನ್ನು ಕುರಿತು, ನಿರಾಶೆಯಿಂದ: “ದರ್ಶನಸಿಂಹನ ಜನರು ಮಾನಕುಮಾರಿಯನ್ನು ಬಹುತರ ಲಖನೌಕ್ಕೆ ತೆಗೆದುಕೊಂಡು ಹೋಗಿರುವರೆಂಬಂತೆ ತೋರುತ್ತದೆ. ಇಷ್ಟೇ ಅಲ್ಲ; ಆ ಚಾಂಡಾಲನು ಆಕೆಯನ್ನು ಬಾದಶಹನ ಅಂತಃಪುರದಲ್ಲಿ ಕಳಿಸಿದ್ದರೂ ಕಳಿಸಿರಬಹುದು. ಹಾಯ್! ಹಾಯ್!! ನಮ್ಮ ಪವಿತ್ರಕುಲಕ್ಕೆ ಎಂಥ ಭಯಂಕರ ಕಲಂಕವಿದು! ಏನು ಮಾಡಿದರೂ

ಈ ಕಲಂಕವು ಹೋಗಲರಿಯದು. ದೇವಾ! ಮಾನಕುಮಾರಿಯು ಸತ್ತಿದ್ದರೆ, ನಾನು ಅವಳ ಮರಣದುಃಖವನ್ನು ಸಹಿಸುತ್ತಿದ್ದೆನು; ಆದರೆ ಅವಳು ಬಾದಶಹನ ಅಂತಃಪುರವನ್ನು ಪ್ರವೇಶಿಸಿದಳೆಂಬ ಕಾಲ್ಪನಿಕ ದುಃಖವನ್ನು ಮಾತ್ರ ಸಹಿಸಲಾರೆನು. ಈ ದುಃಖವು ಮರಣದುಃಖಕ್ಕಿಂತಲೂ ನೂರಾರುಪಟ್ಟು ಭಯಂಕರವಾಗಿರುವದು. ಮಾನಕುಮಾರಿಯು ಯವನರ ಅಂತಃಪುರವನ್ನು ಸೇರಿರಬಹುದೆಂಬ ಕಲ್ಪನೆಯಿಂದಲೇ ನನ್ನ ಹೃದಯವು ನೂರಾರು ಹೋಳಾಗಿರುವದು. ಈ ವೇದನೆಗಳನ್ನು ಇನ್ನು ನಾನು ಸಹಿಸಲಾರೆನು! ಇವೆಲ್ಲ ವೇದನೆಗಳನ್ನು ಶಮನ ಮಾಡತಕ್ಕ ಒಬ್ಬ ಮಿತ್ರನು ಮಾತ್ರ ಇರುವನು. ಅವನಿಗೇ ನಾನು ಶರಣು ಹೋಗುತ್ತೇನೆ!''

''ಅದಾವ ಮಿತ್ರನು? ಈ ದುಃಖಸಾಗರದಿಂದ ದಾಟಿಸತಕ್ಕವನು ಅದಾವನಿರುವನು?''ಎಂದು ಅಯೋಧ್ಯಾನಾಥನು ಆತುರತೆಯಿಂದ ಕೇಳಿದನು.

''ಮೃತ್ಯುವು! ಮೃತ್ಯುವೇ ನನ್ನ ಪರಮ ಮಿತ್ರನು. ಆತನಿಗೆ ಶರಣು ಹೋದ ಹೊರತು, ಈ ಅನಿವಾರ ಶೋಕಾನಲವು ಶಮನವಾಗಲಾರದು!''

ಹೀಗೆ ಮಾತು ಆಡುತ್ತಾಡುತ್ತ ಆ ಉಭಯತರು ಗಂಗಾನದಿಯ ದಂಡೆಗುಂಟ ಸಾಗಿದ್ದರು. ಅವರು ಹೋಗುತ್ತಿದ್ದ ದಂಡೆಯು ಪ್ರದೇಶವು ಪಾತ್ರದಿಂದ ಸಂಾಸರಿ ಇಪ್ಪತ್ತು ಮೂವತ್ತು ಮೊಳ ಎತ್ತರದ ಮೇಲೆ ಇದ್ದು, ಅಲ್ಲಿಂದ ಯಾರಾದರೂ ನದಿಯಲ್ಲಿ ಅಪ್ಪಿತಪ್ಪಿ ಬಿದ್ದರೆ ತೀರಿತು. ಅವರ ಅವಸಾನವು ತೀರಿತೆಂದೇ ತಿಳಿಯಬೇಕು. ಆ ಸ್ಥಳವನ್ನು ನೋಡಿದ ಕೂಡಲೆ ಕಾಶೀನಾಥನಿಗೆ ಆತ್ಮಹತ್ಯೆಯನ್ನು ಮಾಡಿಕೊಳ್ಳಬೇಕೆಂಬ ಉತ್ಕಟೇಚ್ಛೆಯು ಹುಟ್ಟಿತು. ಆಗ ಅವನು: ''ಅಯೋಧ್ಯಾನಾಥ! ಇಗೋ ಇತ್ತ ನೋಡು, ನನ್ನ ಮಿತ್ರನು ನನ್ನನ್ನು ಕರೆಯುತ್ತಿರುವನು. ನಾನು ಹೋಗುವೆನು! ತಿರುಗಿ ನಿನಗೆ ಎಂದೂ ಭೆಟ್ಟಿಯಾಗಲಾರೆನು!'' ಎಂದು ನುಡಿದು ಕಾಶೀನಾಥನು ಒಮ್ಮಿಂದೊಮ್ಮೆ ನದಿಯಲ್ಲಿ ಹಾರಿಕೊಂಡನು! ಮುಂಗಾರಿಯ ಮಿಂಚಿನಂತೆ ಕಾಶೀನಾಥನು ಕ್ಷಣಾರ್ಧದಲ್ಲಿ ಮಾಯವಾದನು!

ಹತಬುದ್ಧನಾದ ಅಯೋಧ್ಯಾನಾಥನು ಬೆಪ್ಪನಾಗಿ ನಿಂತಲ್ಲಿಯೇ

ನಿಂತುಬಿಟ್ಟನು. ಏನೂ ತಿಳಿಯದಾಯಿತು. ಸುತ್ತಲೂ ಹಿಮ್ಮೆ ನಿರೀಕ್ಷಿಸಿದನು; ಮನುಷ್ಯರ ಸುಳಿವೇ ಇಲ್ಲ. ಕಿಂಕರ್ತವ್ಯಮೂಢ ನಾದ ಆತನು ಅಲ್ಲಿಯೇ ಕುಸಿಬಿದ್ದನು. ಪಾಪ! ಏನು ಮಾಡು ವನು? ನೋಡನೋಡುತ್ತ ಬೀಗನು ನದಿಯಲ್ಲಿ ಹಾರಿಕೊಂಡನು. ಜಲಪ್ರವಾಹದ ಕಡೆಗೆ ಹೋಗಲಿಕ್ಕಂತೂ ಮಾರ್ಗವೇ ಇಲ್ಲ ತುಸ ವೇಳೆಯಲ್ಲಿ ಕಾಶೀನಾಥನ ದೇಹವು ನೀರ ಮೇಲೆ ತೇಲಬಹುದೆಂದು ಆತನು ತಿಳಿದಿದ್ದನು; ಆದರೆ ಹಿಂದು ಪ್ರಹರದ ವರೆಗೆ ನೋಡಿದರೂ ಶವವು ಮೇಲೆ ಬರಲೇ ಇಲ್ಲ. ಆತನ ಬುದ್ಧಿಯು ಕುಂಠಿತವಾಯಿತು. ಕಾಶೀನಾಥನು ಜಲಚರಗಳಿಗೆ ಆಹುತಿಯಾದನೆಂದು ತಿಳಿದನು. ಅಯೋಧ್ಯಾನಾಥನ ಮೇಲೆ ಇದೊಂದು ಹೊಸ ಸಂಕಟವೇ ಉಂಟಾ ಯಿತು ಬಳಿಕ ಅವನು ಅಲ್ಲಿಂದ ಹೊರಟು ಸೀತಾಪುರಕ್ಕೆ ನಡದನು.

ಕಾಶೀನಾಥನು ಗಂಗೆಯಲ್ಲಿ ಆತ್ಮತ್ಯಾಗವನ್ನು ಮಾಡಿದ ಏಳ ನೆಯ ದಿವಸ ಅಯೋಧ್ಯಾನಾಥನು ಸೀತಾಪುರಕ್ಕೆ ಮುಟ್ಟಿ, ಮೊದಲು ಕಾಶೀನಾಥನ ವೃತ್ತಾಂತವನ್ನು ನಾರಾಯಣ-ಚಾಂದಕುಮಾರಿಯರ ಮುಂದೆ ಹೇಳಿದನು. ಈ ಸಂಗತಿಯನ್ನು ಹಿಂದೆ ೪೦ನೆಯ ಪುಟದಲ್ಲಿ ತಿಳಿಸಿರುತ್ತದೆ ಅಣ್ಣನ ನಿಧನವಾರ್ತೆಯನ್ನು ಕೇಳಿ, ಚಾಂದಕುಮಾ ರಿಯು ಶೋಕಾಕ್ರಾಂತಳಾದಳು; ಅವಳ ಶೋಕಕ್ಕೆ ಪಾರಾವಾರವೇ ಇಲ್ಲದಂತಾಯಿತು. ಯಾಕಂದರೆ ನಾರಾಯಣಕುಮಾರಿಯು ತಂಗಿ ಯಂತೆ ಶೋಕಾಕುಲಳಾಗಲಿಲ್ಲ; ಅವಳಲ್ಲಿ ಅಯೋಧ್ಯಾನಾಥನಂತೆ ಮನೋಧೈರ್ಯವು ವಾಸವಾಗಿತ್ತು. ಅವಳು ತಂಗಿಯನ್ನು ಪರಿ ಪರಿಯಿಂದ ಸಂತೈಸಿದಳು. ಮೃತಪ್ರಾಯನಾದ ಗಂಗಾಪ್ರಸಾದ ನಿಗೆ ಈ ಕರ್ಣಕಠೋರ ಸುದ್ದಿಯನ್ನು ತಿಳಿಸಿದರೆ, ವಿಪರೀತಪ್ರಸಂಗ ವಾಗಬಹುದೆಂದು ತಿಳಿದು, ಅವನ ಕಿವಿಯ ವರೆಗೆ ಈ ದುರ್ವಾರ್ತೆ ಯನ್ನು ಹಿಮ್ಮೆಲೆ ತಿಳಿಸಬಾರದೆಂದು ಆ ಮೂವರು ನಿಶ್ಚಯಿಸಿದರು.

ಲಖನೌಕ್ಕೆ ಹೋಗಿ ಅಲ್ಲಿಯನ್ನು ಮಾನಕುಮಾರಿಯನ್ನು ಶೋಧಮಾಡಬೇಕೆಂದು ನಿಶ್ಚಯಿಸಿ ಅಯೋಧ್ಯಾನಾಥನು ಲಖನೌಕ್ಕೆ ಹೋದನು. ಮೂರು-ನಾಲ್ಕು ದಿವಸಗಳಲ್ಲಿ ಆತನು ಲಖನೌನಗರ ವನ್ನು ಮುಟ್ಟಿ, ಅಲ್ಲಿ ಸೂಕ್ಷ್ಮರೀತಿಯಿಂದ ಮಾನಕುಮಾರಿಯ ಶೋಧ ಮಾಡಲಾರಂಭಿಸಿದನು.

ಅಯೋಧ್ಯಾನಾಥನು ಒಮ್ಮೆ ಸಂನ್ಯಾಸಿಯ ವೇಷದಿಂದಲೂ, ಮತ್ತೊಮ್ಮೆ ಬುಡಬುಡಿಕೆಯರ ವೇಷದಿಂದಲೂ, ಇನ್ನೊಮ್ಮೆ ಜೋಯಿಸರ ವೇಷದಿಂದಲೂ ಹೆಂಡತಿಯನ್ನು ಹುಡುಕಹತ್ತಿದನು. ಎಷ್ಟು ಹುಡುಕಿದರೂ ಏನೂ ತಿಳಿಯಲೊಲ್ಲದು. ಕಡೆಗೆ ಆತನು ಬಾದಶಹನ ಝನಾನಖಾನೆಯಲ್ಲಿಯ ಸೇವಕರ ಸ್ನೇಹವನ್ನು ಸಂಪಾದಿಸಿ, ಬಾದಶಹನ ಅಂತಃಪುರದಲ್ಲಿಯೂ ಹುಡುಕಹತ್ತಿದನು. ಈ ಕೊನೆಯ ಪ್ರಯತ್ನವೂ ನಿರರ್ಥಕವಾಗಲು ಅಯೋಧ್ಯಾನಾಥನು ಪೂರ್ತಿ, ನಿರಾಶನಾದನು. ಮಾನಕುಮಾರಿಯು ಮಹಾ ಸಾಧ್ವಿಯು; ಆಕೆಯು ಸ್ವಧರ್ಮವನ್ನು ತಾನಾಗಿ ಎಂದೂ ತ್ಯಜಿಸಲಾರಳು. ಅಂಥ ದುರ್ಧರಪ್ರಸಂಗವೇ ಬಂದರೆ, ಅವಳು ಆತ್ಮಹತ್ಯೆಯನ್ನು ಮಾಡಿಕೊಂಡು ನಿಶ್ಚಯವಾಗಿ ತನ್ನ ಸತೀಧರ್ಮವನ್ನು ಕಾಯ್ದುಕೊಳ್ಳುವಳೆಂಬದು ಆತನಿಗೆ ಪೂರ್ಣನಂಬಿಗೆಯಿತ್ತು.

ಒಂದೇಸವನೆ ಎರಡು ವರುಷಗಳ ವರೆಗೆ ಅವಿಶ್ರಾಂತ ಶ್ರಮದಿಂದ ಹುಡುಕಿದರೂ, ಮಾನಕುಮಾರಿಯ ಸುಳಿವೇ ಹೊಳೆಯುವದಿಲ್ಲೆಂದ ಬಳಿಕ, ಅವಳು ಆತ್ಮಹತ್ಯೆಯನ್ನು ಮಾಡಿಕೊಂಡಿರಲಿಕ್ಕೇ ಬೇಕೆಂದು ಅಯೋಧ್ಯಾನಾಥನು ನಿಶ್ಚಯಿಸಿದನು. ಇನ್ನು ಮೇಲೆ ಮಾತ್ರ ತಾನು ಇಲ್ಲಿ ಇರದೆ, ತನ್ನ ಮನೋಬಯಕೆಯನ್ನು ನಾರಾಯಣಕುಮಾರಿಗೆ ತಿಳಿಸಿ, ಶೇಷಾಯುಷ್ಯವನ್ನು ಈಶ ಚಿಂತನೆಯಲ್ಲಿ ಕಳೆಯುವದಕ್ಕೋಸ್ಕರ ಕಾಶಿಗೆ ಹೋಗಬೇಕೆಂದು ನಿಶ್ಚಯಿಸಿ, ಸೀತಾಪುರದ ಕಡೆಗೆ ಹೊರಟನು. ಪ್ರಿಯತಮೆಯ ಸಲುವಾಗಿ ನಾನು ಇಲ್ಲಿಯ ವರೆಗೆ ಶಕ್ತಿಮೀರಿ ಪ್ರಯತ್ನಬಟ್ಟೆನು. ಇನ್ನು ಮಾತ್ರ ದೈವದ ಮೇಲೆ ವಿಶ್ವಾಸವಿಡಬೇಕೇ ಹೊರತು, ಅನ್ಯ ಉಪಾಯವಿಲ್ಲೆಂದು ವಿಚಾರ ಮಾಡುತ್ತ ಆತನು ಸೀತಾಪುರದ ಮಾರ್ಗವನ್ನು ಹಿಡಿದನು; ಆದರೆ ಸೀತಾಪುರಕ್ಕೆ ಮುಟ್ಟುವದಕ್ಕಿಂತ ಮೊದಲೇ ಆತನಿಗೆ ನಾರಾಯಣಕುಮಾರಿಯು ನೇಪಾಳದ ಕಡೆಗೆ ಓಡಿ ಹೋಗಿರುವಳೆಂಬ ಸುದ್ದಿ ತಿಳಿಯಿತು. ಪಾಪ! ಅಯೋಧ್ಯಾನಾಥನ ಮೇಲೆ ಮತ್ತೊಂದು ಸಂಕಟವು ಬಂದೊದಗಿತು! ಏನು ಮಾಡಬೇಕು? ಯಾವದೂ ತಿಳಿಯಲೊಲ್ಲದು! "ದೇವಾ, ವಿಶ್ವೇಶ್ವರಾ! ನನಗೆ ನಿನ್ನ ಹೊರತು ಅನ್ಯರ ಗತಿಯಿಲ್ಲ! ನಾನು ಮಾಡಿದ ಪ್ರಯತ್ನಗಳೆಲ್ಲ

ನಿಷ್ಫಲವಾದವು! ಸಂಕಟಗಳಿಗೆ ಎದುರಾಗುತ್ತ ಹೋದಂತೆ ಅವು ಹೆಚ್ಚಾಗುತ್ತಲೆ ನಡೆದಿರುವವು! ವಿಪದ್ರಕ್ಷಕಾ, ಶಂಭೋ!" ಇತ್ಯಾದಿ ವಿರಕ್ತ ವಿಚಾರಗಳನ್ನು ಮಾಡುತ್ತ ಆತನು ಸಂನ್ಯಾಸಿಯ ವೇಷದಿಂದ ಕಾಶಿಗೆ ಹೊರಟನು. ತಾರುಣ್ಯದ ಭರದಲ್ಲಿ ಅಯೋಧ್ಯಾನಾಥನು ಹೀಗೆ ಸಂನ್ಯಾಸಿಯ ವೇಷದಿಂದ ದೇಶಭ್ರಮಣ ಮಾಡುತ್ತಿರುವದನ್ನು ನೋಡಿ, ಠಕ್ಕರ ಮೇಲೆ ನಿಯಮಿಸಲ್ಪಟ್ಟ ಸಿಪಾಯಿಗಳು ಈತನೂ ಠಕ್ಕನೇ ಎಂದು ತಿಳಿದು, ಆತನನ್ನು ಹಿಡಿದು ಗೋರಖಪುರಕ್ಕೆ ವಿಚಾರಣೆಗೋಸ್ಕರ ಕಳುಹಿದರು!

ವಾಚಕವೃಂದ! ಈ ಸಂಕಟಗಳ ಸುರಿಮಳೆಯಲ್ಲಿ ಸಿಕ್ಕ ಅಯೋಧ್ಯಾನಾಥನ ಸ್ಥಿತಿಯು ಆಗ್ಗೆ ಹೇಗಾಗಿರಬಹುದು?

---

## ಕರ್ಮಕಥೆ.



ನಮ್ಮ ಕಥಾನಕವು ನಡೆದ ಕಾಲದಲ್ಲಿ ಠಕ್ಕರ ಪುಂಡಾಟಿಕೆಯು ಬೆಳೆದಿತ್ತೆಂಬದು ನಮ್ಮ ವಾಚಕರಿಗೆ ಅರಿಯದ ಸಂಗತಿಯಲ್ಲವಷ್ಟೇ; ಆ ಕಾಲದಲ್ಲಿ ಕಂಪನೀ ಸರಕಾರದ ಆಳಿಕೆಯು ಮೆಲ್ಲ-ಮೆಲ್ಲನೆ ಪ್ರಾರಂಭಿಸಹತ್ತಿತ್ತು ಓರ್ವ ಇಂಗ್ಲೀಷ ಅಧಿಕಾರಿಯು:—ಠಕ್ಕರನ್ನು ಹಿಡಿದು ಶಾಸನ ಮಾಡಬೇಕೆಂದು ಆ ಕೆಲಸವನ್ನು ಕೈಕೊಂಡಿದ್ದನು ಆತನ ಸ್ನೇಹಿತರು ಕೆಲ ಜನ ಠಕ್ಕರನ್ನು ಗೋರಖಪುರದಲ್ಲಿ ಸೆರೆ ಇಟ್ಟಿದ್ದರು ಈ ದಿನ ಅವರ ನ್ಯಾಯ ವಿಚಾರಣೆ ಇರುವದು. ಠಕ್ಕರ ಚರಿತ್ರವು ಮನೋರಂಜಕವಿದ್ದದ್ದರಿಂದ, ವಾಚಕರೇ, ನಾವು ಆ ವಿಚಾರಣೆ ನಡೆದಲ್ಲಿಗೆ ಹೋಗೋಣ, ನಡೆಯಿರಿ.

ಅಗೋ ನೋಡಿರಿ. ಸಿಪಾಯಿಗಳು ಠಕ್ಕರನ್ನು ಸೆಶನ್‌ಕೋರ್ಟಿನಲ್ಲಿ ಎಳೆ ತಂದರು. ನ್ಯಾಯಾಧೀಶನು ಓರ್ವ ಠಕ್ಕನನ್ನು ಕುರಿತು ಇಂತು ಪ್ರಶ್ನೆ ಮಾಡಿದನು!

"ನಿನ್ನ ಹೆಸರೇನು?"

"ಕ್ಷೇಮಾ ಜಮಾದಾರ."

"ನಿನ್ನ ಉದ್ಯೋಗವೇನು?"

"ಮೋಘಪೂನಾ— ಅಂದರೆ ದಾರಿಕಾರರನ್ನು ಕೊಂದು ಅವರ ಸಣ್ಣ-ಸಣ್ಣ ಹುಡುಗರನ್ನು ತುಡುಗು ಮಾಡುವದು."

"ಈ ಉದ್ಯೋಗವು ಯಾರಿಂದ ಸುರುವಾಯಿತು?"

"ಮುಲತಾನದ ಅಲಿಕರಾಮನಿಂದ; ನಾಲ್ವತ್ತು ವರುಷಗಳ ಮೊದಲು ನಾನು ಆತನ ಶಿಷ್ಯನಿದ್ದೆನು"

"ನೀನು ಎಲ್ಲೆಲ್ಲಿ ಕೊಲೆಯನ್ನು ಮಾಡಿರುವಿ?"

"ಜಯಪೂರ, ಬಿಕಾನೇರ, ಭರತಪೂರ, ಪಂಜಾಬ, ಅಯೋಧ್ಯಾ ಮತ್ತು ಪ್ರಯಾಗಗಳಲ್ಲಿ ಮಾಡಿರುವೆನು."

"ನಿನ್ನ ಹೆಂಡಿರು-ಮಕ್ಕಳನ್ನು ಸಂಗಡ ತೆಗೆದುಕೊಂಡು ಅಡ್ಡಾಡುವಿಯೋ?"

"ಹೌದು ನಮ್ಮ ಹೆಂಡಿರು-ಮಕ್ಕಳು ನಮ್ಮ ಸಂಗಡಲೇ ಇರುವರು ನಾವು ಖೂನಿಯನ್ನು ಮಾಡಿ ಹಿಡತಂದ ಹುಡುಗರನ್ನು ಅವರೇ ಜೋಪಾನ ಮಾಡುವರು"

"ಆ ಅನಾಥ ಹುಡುಗರನ್ನು ಯಾಕೆ ತೆಗೆದುಕೊಂಡು ಹೋಗುವಿರಿ?"

"ಮುಂದೆ ನಾವು ಅವನ್ನು ಮಾರುತ್ತೇವೆ."

"ಯಾರಿಗೆ ಮಾರುತ್ತೀರಿ? ಮತ್ತು ಮಾರಿದರೆ ಎಷ್ಟು ಬೆಲೆ ಬರುತ್ತದೆ?"

"ವೇಶ್ಯೆಯರೂ, ನರ್ತಕಿಯರೂ, ಗಣಿಕೆಯರೂ ಆದವರು ನಮ್ಮ ಹುಡುಗರನ್ನು ಮಾರಲಿಕ್ಕೆ ತೆಗೆದುಕೊಳ್ಳುತ್ತಾರೆ. ಒಬ್ಬ ಹುಡುಗನಿಗೆ ಎಂಭತ್ತು-ಎಂಭತ್ತೈದು ರೂಪಾಯಿಗಳು ಬರುತ್ತಿದ್ದು, ಹುಡಿಗೆಯರಿಗೆ ಇದಕ್ಕೂ ಹೆಚ್ಚು ಬರುತ್ತವೆ."

"ನೀವು ಯಾವ ದೇವರನ್ನು ಪೂಜಿಸುತ್ತೀರಿ?"

"ಭವಾನೀದೇವಿಯನ್ನು. ಹುಡುಗೆರನ್ನು ಮಾರಿ ಬಂದ ಹಣದಲ್ಲಿ ಅಲ್ಪ ಸ್ವಲ್ಪ ದೇವಿಯ ಸಲುವಾಗಿ ಖರ್ಚು ಮಾಡುತ್ತೇವೆ."

"ಶಹಾಜಹಾನಪೂರದ ಮತ್ತು ಮಥುರೆಯ ಕೊಲೆಯಲ್ಲಿ ನೀನು ಇದ್ದೆಯೋ?"

"ಹೌದು, ಇದ್ದೆನು."

"ಮತ್ತೆ ಯಾರ್‍ಯಾರು ಇದ್ದರು?"

"ರತನದಾಸ, ದೇವೀದಾಸ, ದೇವೀದಾಸನ ಹೆಂಡತಿ ಗಂಗಾ, ಕ್ಷೇಮಾ, ಆತನ ಹೆಂಡತಿ ಕಾಳಿ, ಈ ಕೊತವಾಲ, ಸಾಲಗೀದಾಸ, ಜಾನಕೀದಾಸ ಮತ್ತು ರೂಪ್ಯಾ ಮುಂತಾದ ಎಷ್ಟೋ ಜನರಿದ್ದರು."

ಕ್ಷೇಮಾಜಮಾದಾರನ ಸಾಕ್ಷಿಯಾದ ಮೇಲೆ ಮತ್ತೊಂದು ಮೇಘಪೂನಾ ಜಾತಿಯಲ್ಲಿಯ 'ಅಮರೀ' ಎಂಬ ಹೆಸರಿನ ಸ್ತ್ರೀಯ ಸಾಕ್ಷಿಯಾಯಿತು.

"ನಿನ್ನ ಹೆಸರೇನು?"

"ಅಮರೀ ಊರ್ಫ ಕುಂಭಾ"

"ನೀನು ಮೊದಲು ದಿಲ್ಲಿಯ ಸೆರೆಮನೆಯಲ್ಲಿ ಇದ್ದಿಯಲ್ಲವೇ?"

"ಹೌದು. ಸುಮಾರು ನಾಲ್ಕೆಂಟು ವರುಷಗಳ ಹಿಂದೆ ನಾಲ್ಕು ವರುಷಗಳ ವರೆಗೆ ತುರಂಗದಲ್ಲಿ ಇದ್ದೆನು."

"ನಿನಗೆ ಶಿಕ್ಷೆಯಾಗಲಿಕ್ಕೆ ಕಾರಣವೇನು?"

"ದಿಲ್ಲಿಯ ಹತ್ತರ ಮೂರು ಜನರ ಕೊಲೆಯನ್ನು ಮಾಡಿದ ಆರೋಪವು ನನ್ನ ಮೇಲೆ ಇತ್ತು."

"ನಿನ್ನನ್ನು ಹೇಗೆ ಹಿಡಿದರು?"

"ನಮ್ಮ ಗುಂಪಿನಲ್ಲಿಯ ಜನರು ದಿಲ್ಲಿಯ ಹತ್ತರ ಇಬ್ಬರು ಗಂಡಸರನ್ನೂ ಒಬ್ಬ ಹೆಂಗಸನ್ನೂ ಕೊಂದು, ಅವರ ಹೆಣಗಳನ್ನು ಯಮುನಾನದಿಯಲ್ಲಿ ಬಿಸುಟಬಿಟ್ಟರು. ತರುವಾಯ ಅವರ ಸಂಗಡ ಇದ್ದ ಮೂರು-ನಾಲ್ಕು ವರುಷದ ಒಂದು ಹುಡಿಗೆಯನ್ನು ನಾನು

ಎತ್ತಿಕೊಂಡು ನಡೆದೆನು. ಅಷ್ಟರಲ್ಲಿ ಒಬ್ಬ ಸಾಹೇಬನಿಗೆ ನಮ್ಮ ಸುಳುವು ಗೊತ್ತಾಗಿ, ಆತನು ನಮ್ಮ ಬೆನ್ನು ಹತ್ತಿದನು. ಹುಡಿಗೆಯು ಹಾದಿಯಲ್ಲಿ ಬಹಳ ಅಳಹತ್ತಿದ್ದರಿಂದಲೂ, ಸಾಹೇಬನು ತೀರ ಬೆನ್ನ ಮೇಲೆಯೇ ಬಂದದ್ದರಿಂದಲೂ ನಾನು ಆ ಹುಡಿಗೆಯನ್ನು ಹಾದಿಯಲ್ಲಿಯೇ ಚಲ್ಲಿಕೊಟ್ಟು ಓಡಿಹೋಗಹತ್ತಿದೆನು; ಆದರೂ ಒಬ್ಬ ಶಿಪಾಯಿಯು ನನ್ನ ಬೆನ್ನ ಹತ್ತಿ ಹಿಡಿದು ಬಿಟ್ಟನು.''

ವಾಚಕವೃಂದ! ಈ ಮೇಲಿನ ಠಕ್ಕಳ ಸಾಕ್ಷಿಯನ್ನು ಕೋರ್ಟಿನ ಹಿಂದು ಬದಿಗಿದ್ದ ಕೆಂಪು ಶಾಟಿಯ ವಸ್ತ್ರವನ್ನು ಧರಿಸಿದ ಸಂನ್ಯಾಸಿಯು(ಸರಕಾರಿ ರೀತಿಯಿಂದ ಠಕ್ಕನು) ಒಂದೇ ಮನದಿಂದ ಕೇಳುತ್ತಿದ್ದನು. ಆತನ ನಿಲುವಿಕೆಯು ಸರ್ವಸಾಧಾರಣವಿದ್ದು, ಗೌರವರ್ಣದ ಆತನ ಮುಖಮಂಡಲವು ನಭೋಮಂಡಲದಲ್ಲಿಯ ಶೈಶಿರದ ಚಂದ್ರಮನ ಸ್ಮರಣ ಮಾಡಿಕೊಡುತ್ತಿತ್ತು. ಆತನ ನೇತ್ರಗಳು ವಿಶಾಲವಿದ್ದು, ಮೊಗಮೀಸೆಗಳು ಸ್ವಲ್ಪ ಬೆಳೆದಿದ್ದವು. ಆತನು ಯೋಗಿ-ಮುನಿಗಳಂತೆ ಜಟೆಯನ್ನು ತಳೆದಿದ್ದನು. ಆತನ ಮೈಮೇಲೆ ಒಂದೂ ಆಭರಣಗಳಿದಿಲ್ಲ. ಆತನು ಒಳಗೆ ಕಫನಿಯನ್ನು ಹಾಕಿ ಮೇಲೊಂದು ಭಗವೀ ವಸ್ತ್ರವನ್ನು ಶರೀರದ ತುಂಬೆಲ್ಲ ಆಚ್ಛಾದಿಸಿದ್ದನು. ಹೀಗೆ ತಾರುಣ್ಯದ ಭರದಲ್ಲಿಯೇ ವಿರಕ್ತವೇಷವನ್ನು ತಳೆಯ ಬೇಕಾದರೆ, ಆತನಿಗೆ ಯಾವದೊಂದು ಮಾನಸಿಕ ತಾಪವಾಗಿರಲಿಕ್ಕೆ ಬೇಕಷ್ಟೇ? ಇಷ್ಟೇ ಅಲ್ಲ; ಆತನು ಮಾನಸಿಕ ತಾಪದಿಂದಲೇ ವೈರಾಗ್ಯವನ್ನು ತಳೆದಿರುವನೆಂಬದನ್ನು ಆತನ ಮುಖಮಂಡಲವು ಚಾಕಾಕ್ಷ ರೀತಿಯಿಂದ ನೋಡುವವರಿಗೆ ಒಡೆದು ಹೇಳುತ್ತಿತ್ತು. ಇರಲಿ

ಮೇಲಿನ ಠಕ್ಕಳ ಸಾಕ್ಷಿಯಲ್ಲಿ ದಿಲ್ಲಿಯ ಹತ್ತರ ಮೂವರನ್ನು ಕೊಂದು ಒಬ್ಬ ಸಣ್ಣ ಬಾಲಿಕೆಯನ್ನು ತೆಗೆದುಕೊಂಡು ಹೋದ ವಿಷಯವು ಬಂದದ್ದರಿಂದ, ನಮ್ಮ ಮೇಲಿನ ತರುಣನ ಕಿವಿಗಳು ತೆರೆದವು. ಆತನ ವಿರಕ್ತ ಮುಖದ ಮೇಲೆ ಕಿಂಚಿತ್ ಆಶೆಯು ಮೊಳೆ

ದೋರಿದಂತಾಯಿತು. ಮನಸ್ಸು ಮುಂದಿನ ವಿಷಯವನ್ನು ಕೇಳುವದರ ಸಲುವಾಗಿ ಆತುರಪಟ್ಟಿತು ಆಗಿನ ಕಾಲಕ್ಕೆ ಆತನು ಠಕ್ಕಳ ಮುಖದಿಂದ ಹೊರಟ ಪ್ರತಿಯೊಂದು ಅಕ್ಷರವನ್ನು ಗ್ರಹಣ ಮಾಡಬೇಕೆಂದು ನಿಶ್ಚಯಿಸಿದಂತೆ ತೋರಿತು

ಕೋರ್ಟಿನವರು ಠಕ್ಕರವಳನ್ನು ಕೇಳತೊಡಗಿದರು:—"ಆ ಹುಡಿಗೆಯು ಈಗ ಎಲ್ಲಿ ಇರುವಳು?"

"ಅದು ನನಗೆ ಗೊತ್ತಿಲ್ಲ, ಆಗ್ಗೆ ಮಾತ್ರ ಆ ಸಾಹೇಬನು ತೆಗೆದುಕೊಂಡು ಹೋದನು."

"ನಿಮ್ಮ ಗುಂಪಿನ ಮುಖ್ಯಸ್ಥನಾರು?"

"ನನ್ನ ಪತಿ ಜೀವನದಾಸನೇ ನಮ್ಮ ಗುಂಪಿನ ನಾಯಕನು."

"ನಿಮ್ಮ ಗುಂಪಿನಲ್ಲಿ ಎಷ್ಟು ಜನರಿದ್ದರು?"

"ನಾಲ್ವತ್ತು ಜನರು."

"ಅವರ ಹೆಸರುಗಳನ್ನು ಹೇಳು, ನೋಡೋಣ"

"ನನ್ನ ಮಗ ರೂಪಲಾನೂ, ಆತನ ಇಬ್ಬರು ಹೆಂಡಂದಿರೂ, ನನ್ನ ಪತಿಯಾದ ಜೀವನದಾಸನೂ, ಇವರಲ್ಲದೆ ಮಂಗಲದಾಸ, ಇಮಾಮುಬಕ್ಷ, ಇಬ್ರಾಹಿಮ ಮತ್ತು ಗಣೇಶ ಮುಂತಾದ ಎಷ್ಟೋ ಪುಂಡಾಳುಗಳೂ ಇದ್ದರು. ಈ ಮುದುಕ ಸಾಲಿಗ್ರಾಮಸಿಂಹನು ನಮ್ಮ ಹಿಂಡಿನಲ್ಲಿ ಸುಮಾರು ಹತ್ತು ವರುಷಗಳ ಹಿಂದೆ ಬಂದನು."

ಆಕೆಯ ಮುಖದಿಂದ ಬ್ರಾಹ್ಮಣನ ಹೆಸರನ್ನು ಕೇಳಿದ ಕೂಡಲೆ ನ್ಯಾಯಾಧೀಶನು ಅವಳ ಸಾಕ್ಷಿಯನ್ನು ಅಲ್ಲಿಂದಲ್ಲಿಯೇ ನಿಲ್ಲಿಸಿ, ಆಕೆಯು ತೋರಿಸಿದ ಆ ವೃದ್ಧ ಸಾಲಿಗ್ರಾಮಸಿಂಹನ ಸಾಕ್ಷಿಯನ್ನು ತೆಗೆದುಕೊಳ್ಳಬೇಕೆಂದು ನಿಶ್ಚಯಿಸಿದನು. ಯಾಕಂದರೆ, ಆ ಬ್ರಾಹ್ಮಣನು ಅಂತಕನ ರಾಜ್ಯದಲ್ಲಿ ಹಿಂದೆರಡು ಹೆಜ್ಜೆಗಳನ್ನು ಸಹ ಇಟ್ಟಿದ್ದನು; ಬಹಳವಾದರೆಇನ್ನೊಂದು ದಿನ ಬದುಕಿದರೆ ಬದುಕಬಹುದಾಗಿತ್ತು.

ವೃದ್ಧಬ್ರಾಹ್ಮಣನು ಕೋರ್ಟಿನ ಹೊರಗೆ ಹಿಂದು ಕಂಬಳಿಯ

ಮೇಲೆ ಬಿದ್ದಿದ್ದು, ಆತನಿಗೆ ತನ್ನ ಕೈಕಾಲುಗಳನ್ನು ಸ್ವೇಚ್ಛೆಯಾಗಿ ಎಳಕೊಳ್ಳಲಿಕ್ಕೆ ಬರುವಷ್ಟು ಸಹ ಶಕ್ತಿಯು ಇದ್ದಿದ್ದಿಲ್ಲ! ಆತನ ಕಣ್ಣುಗಳು ಒಳಹೊಕ್ಕಿದ್ದು, ಶ್ವಾಸೋಚ್ಛ್ವಾಸವು ಮೆಲ್ಲಗೆ 'ಗುರ್-ಗುರ್' ಎಂದು ಸಾಗಿತ್ತು. ಆತನ ಮೈಯಲ್ಲಿ ಎಲುವು-ತೊಗಲುಗಳ ಹೊರತು ಮತ್ತೇನೂ ಇದ್ದಿಲ್ಲ. ಆತನು ಪಶ್ಚಾತ್ತಾಪಾಗ್ನಿಯಿಂದ ಬೆಂದವನಾಗಿ, ಕಣ್ಣು ಮುಚ್ಚಿ ಪರಮೇಶ್ವರನನ್ನು ಸ್ಮರಿಸುತ್ತಿರುವಂತೆ ತೋರುತ್ತಿತ್ತು. ಒಂದು ಕಂಬಳಿಯನ್ನು ಅಸ್ತವ್ಯಸ್ತ ಚಲ್ಲಿ, ಮೇಲೊಂದು ಶಾಟಿಯನ್ನು ಹೊತ್ತುಕೊಂಡು ಆತನು ಬಿದ್ದಿದ್ದನು. ಬ್ರಾಹ್ಮಣನಿಗೆ ಎದ್ದು ನಿಂತು ಸಾಕ್ಷಿಯನ್ನು ಹೇಳುವಷ್ಟು ಶಕ್ತಿಯಿಲ್ಲೆಂದು ತಿಳಿದು, ನ್ಯಾಯಾಧೀಶನು ಆತನ ಕಂಬಳಿಯ ಹತ್ತರವೇ ಹೋಗಿ, ಸಾಕ್ಷಿಯನ್ನು ತೆಗೆದುಕೊಳ್ಳಹತ್ತಿದನು. ಸಾಹೇಬನು ಆತನಿಗೆ ಪ್ರಶ್ನ ಮಾಡಿದಕೂಡಲೆ, ಮೊದಲು ಆತನು:'ಢಳ-ಢಳ' ಅಳಹತ್ತಿದನು. "ಸಾಹೇಬ, ನಾನು ಘೋರ ಪಾತಕಿಯಿರುವೆನು. ನೀವು ನನ್ನನ್ನು ಮೊದಲು ಗಲ್ಲಿಗೆ ಹಾಕಿರಿ. ನಾನು ನನ್ನ ಪ್ರಿಯ ಬಂಧುವಿನ ಮಾತು ಕೇಳದೆ, ಆತನ ಆಜ್ಞೆಯನ್ನು ಉಲ್ಲಂಘಿಸಿದ್ದರಿಂದ-ಅತನ ಮಾರ್ಗವನ್ನು ಅವಲಂಬಿಸದ್ದರಿಂದ ಈ ಯಾತನೆಯನ್ನು ಅನುಭೋಗಿಸುತ್ತಿರುವೆನು. ಸಾಹೇಬರೇ, ಕಾರಣ ಮೊದಲು ನನ್ನನ್ನು ಗಲ್ಲಿಗೆ ಹಾಕಿರಿ! ಅನುಮಾನ ಮಾಡಬೇಡಿರಿ!!"

ನ್ಯಾಯಾಧೀಶನು ಬ್ರಾಹ್ಮಣನನ್ನು ಪರಿಪರಿಯಿಂದ ಸಂತೈಸಿ, ಮಧುರ ನುಡಿಗಳಿಂದ ಕೇಳುತ್ತಾನೆ:— "ದಿಲ್ಲಿಯ ಕೊಲೆಯ ವೇಳೆಯಲ್ಲಿ ನೀನು ಇದ್ದಿಯೋ ಹೇಗೆ? ಹಾಗು ಮತ್ತೆ ಯಾರ್ಯಾರು ಇದ್ದರು?"

ಬ್ರಾಹ್ಮಣನು ನಡುಗುವ ಧ್ವನಿಯಿಂದ:— "ಸಾಹೇಬರೇ, ನೀವು ಮೊದಲು ನನ್ನ ಪ್ರಶ್ನೆಗೆ ಉತ್ತರವನ್ನು ಕೊಟ್ಟ ವಿನಃ, ನಾನು ನಿಮ್ಮ ಪ್ರಶ್ನೆಗಳಿಗೆ ಉತ್ತರವನ್ನು ಕೊಡಲಾರೆನು. ಗಲ್ಲಿಗೆ ಹಾಕುವಿರಲ್ಲವೇ? ಏನನ್ನು ಮಾಡುವಿರಿ?"

ವೃದ್ಧಬ್ರಾಹ್ಮಣನ ಮಾತುಗಳನ್ನು ಕೇಳಿ ನ್ಯಾಯಾಧೀಶನು ಗೊಂದಲದಲ್ಲಿ ಬಿದ್ದನು. ಬ್ರಾಹ್ಮಣನಿಗೆ ಏನು ಹೇಳಬೇಕೆಂಬದು ಆತನಿಗೆ ತಿಳಿಯಲೊಲ್ಲದು. ಆಗ ಆತನು ಕಿಂಚಿತ್ ತ್ರಾಸಿಕ ಸ್ವರ ದಿಂದ:—"ಅದಿಗಲಿ, ಮತ್ತೆ ಏನಾದರೂ ನಿನ್ನ ಪ್ರಶ್ನೆಗಳಿರುವವೋ ಹೇಗೆ? ಇದ್ದರೆ ಕೇಳು?"

ಮುದುಕನು ತುಸ ಸ್ಥಿರನಾಗಿ:—"ಸಾಹೇಬರೇ, ಅರಸನೇ ಕುಳಿತುಕೊಂಡು ದರವಡೆಖೋರರಂತೆ ಪ್ರಜೆಗಳ ಸರ್ವಸ್ವವನ್ನು ಅಪಹರಿಸಹತ್ತಿದರೆ ಮತ್ತು ರಾಜ್ಯದಲ್ಲಿಯ ಸ್ತ್ರೀಯರ ಮೇಲೆ ಭಯಂಕರ ಅತ್ಯಾಚಾರವನ್ನು ಮಾಡಹತ್ತಿದರೆ, ಆತನ ನ್ಯಾಯ ನಿರ್ಣಯವನ್ನು ಯಾರು ಮಾಡತಕ್ಕವರು?"

ಬ್ರಾಹ್ಮಣನ ಮಾತುಗಳು ಸಾಹೇಬನಿಗೆ ಏನೂ ಹೊಳೆಯ ಲಿಲ್ಲ ದಂಗು ಬಡಿದವನಂತೆ ಸುಮ್ಮನೆ ನಿಂತುಬಿಟ್ಟನು; ಆದರೆ ಬ್ರಾಹ್ಮಣನು ಮಾತ್ರ ಪುನಃ ಪುನಃ ಅದೇ ಪ್ರಶ್ನೆಯನ್ನು ಕೇಳತೊಡ ಗಿದನು. "ದೇಶರಕ್ಷಕನೆಂದು ಹೊಗಳಿಸಿಕೊಳ್ಳುವ ಅರಸನೇ ಪ್ರಜೆ ಗಳ ಸರ್ವಸ್ವವನ್ನು ಹರಣ ಮಾಡಹತ್ತಿದರೆ, ಆತನ ನ್ಯಾಯಾನ್ಯಾ ಯಗಳ ವಿಚಾರಣೆಯನ್ನು ಯಾರು ಮಾಡತಕ್ಕವರು?"

ಬ್ರಾಹ್ಮಣನ ಪ್ರಶ್ನೆ ಮಾಲಿಕೆಗಳನ್ನು ಕೇಳಿ, ಸಾಹೇಬನು ಮತ್ತಿಷ್ಟು ಗೊಂದಲದಲ್ಲಿ ಬಿದ್ದು ನುಡಿಯುತ್ತಾನೆ:—"ಬ್ರಾಹ್ಮಣಾ, ನೀನನ್ನುವದೇ ನನಗೆ ಮೊದಲು ತಿಳಿಯಲೊಲ್ಲದು. ಅಂದಮೇಲೆ ನಾನು ಏನು ಹೇಳಲಿ? ಮೊದಲು ನಿನ್ನ ಸಾದ್ಯಂತ ಸಂಗತಿಯನ್ನು ಹೇಳು; ಅಂದರೆ ನೀನನ್ನುವದು ನೆಟ್ಟಗೆ ತಿಳಿದೀತು."

ವೃದ್ಧಬ್ರಾಹ್ಮಣನು ಆಕ್ರೋಶವಂಗೈಯುತ್ತ ಉದ್ವಿಗ್ನದಿಂದ ನುಡಿಯುತ್ತಾನೆ:—"ಸಾಹೇಬರೇ, ನನ್ನ ನೂರಾಯೆಂಟು ತಲೆಯ ವರಲ್ಲಿ ಒಬ್ಬರೂ ಇಂಥ ಅಧರ್ಮದ ಕೆಲಸವನ್ನು ಮಾಡಿಲ್ಲ. ನಾನು ಮಾತ್ರ ಅತ್ಯಂತ ಪಾಪಿಷ್ಠನಾದ್ದರಿಂದಲೇ ಠಕ್ಕರ ಗುಂಪಿನಲ್ಲಿ ಸೇರಿ ದೆನು. ಸಾಹೇಬರೇ, ಏನು ಹೇಳಲಿ? ನನ್ನ ಅಸಹ್ಯಕಥೆಯನ್ನು

ಹೇಳಬೇಕಾದರೆ ಎದೆಯು ಒಡೆದು ಹೋಗುತ್ತದೆ!''

ಆವರಿಯ ಸಾಕ್ಷಿಯನ್ನು ಆತುರತೆಯಿಂದಲೂ, ಚಿತ್ತೈಕಾಗ್ರತೆಯಿಂದಲೂ ಕೇಳುತ್ತಿದ್ದ ತರುಣ ಬೈರಾಗಿಯು ಬ್ರಾಹ್ಮಣನ ಚರಿತ್ರವನ್ನು ಸಹ ಅತ್ಯಂತ ಮನಃಪೂರ್ವಕ ಕೇಳತೊಡಗಿದನು; ಬ್ರಾಹ್ಮಣನ ಧ್ವನಿಯನ್ನು ಕೇಳಿದ ಕೂಡಲೆ, ಇದೇ ಧ್ವನಿಯನ್ನು ಎಲ್ಲಿಯೋ ಒಮ್ಮೆ ಕೇಳಿದಂತೆ ಆತನಿಗೆ ಭಾಸವಾಗಹತ್ತಿತು; ಆದರೆ ಎಲ್ಲಿ ಕೇಳಿರಬಹುದೆಂಬದು ಮಾತ್ರ ಆತನಿಗೆ ಸ್ಮರಣವಾಗಲಿಲ್ಲ ನೆನವು ಮಾಡಿಕೊಳ್ಳಬೇಕೆಂದು ಎಷ್ಟೋ ಹೊತ್ತು ಪ್ರಯತ್ನಬಟ್ಟನು; ಎಲ್ಲವೂ ವ್ಯರ್ಥ. ಮೋರೆಯನ್ನಾದರೂ ನೋಡಿ ಗುರುತು ಹಿಡಿಯಬಹುದೆಂದು ಶಿಪಾಯಿಗಳಿಗೆ ಹೇಳಿಕೊಂಡು ಹತ್ತರ ಹೋದನು; ಆದರೆ ಬ್ರಾಹ್ಮಣನ ಮೋರೆಯ ಮೇಲೆಲ್ಲ ಕೂದಲುಗಳು ತುಂಬಿದ್ದರಿಂದಲೂ, ಎಷ್ಟೋ ದಿವಸಗಳಿಂದ ಆತನಿಗೆ ಅನ್ನ-ನೀರುಗಳು ದೊರೆಯದ್ದರಿಂದ ಕಣ್ಣು-ಗಲ್ಲಗಳು ಒಳಹೊಕ್ಕದ್ದರಿಂದಲೂ ತರುಣನಿಗೆ ಆತನ ಗುರುತು ಹತ್ತಲಿಲ್ಲ. ಈ ಧ್ವನಿಯನ್ನು ಮಾತ್ರ ನಾನು ಎಲ್ಲಿಯಾದರೂ ಕೇಳಿರಬಹುದು-ಕೇಳಿರಲಿಕ್ಕೇ ಬೇಕು, ಎಂದು ನಿಶ್ಚಯಪೂರ್ವಕವಾಗಿ ಕೇಳತೊಡಗಿದನು; ಆದರೆ ಅದೇ ಕಾಲಕ್ಕೆ ಮತ್ತೊಂದು ಮನಸ್ಸು 'ಒಬ್ಬರ ಧ್ವನಿಯಂತೆ ಮತ್ತೊಬ್ಬರದಿರಬಾರದೇಕೆ? ಇವರು ಯಾರಾದರೂ ಇರಬಹುದು; ಎಂದು ಅನ್ನಲಾರಂಭಿಸಿತು. ಏನೇ ಇರಲಿ; ಬ್ರಾಹ್ಮಣನ ಭಾಷಣವನ್ನೆಲ್ಲ ಮನಗೊಟ್ಟು ಕೇಳಿ, ಏನಾದರೂ ಲಭ್ಯಾಂಶವು ಹೊರಡುತ್ತದೋ ಏನೋ, ನೋಡಬೇಕೆಂದು ನಿಶ್ಚಯಿಸಿ, ತರುಣನು ಬ್ರಾಹ್ಮಣನ ಸಾಕ್ಷಿಯನ್ನು ಕೇಳಹತ್ತಿದನು.

ನ್ಯಾಯಾಧೀಶನು ಸುಮಧುರ ಭಾಷಣಗಳಿಂದ ಪರಿಪರಿಯಾಗಿ ಸಂತೈಸಿದ ಬಳಿಕ ಬ್ರಾಹ್ಮಣನು ಮಾತನಾಡಲಾರಂಭಿಸಿದನು:—

,,ಸಾಹೇಬರೇ, ನನ್ನ ಹೆಸರು ಪಂಡಿತ ಬಡದೇವಪ್ರಸಾದ; ನಮ್ಮ ಅಣ್ಣನ ಹೆಸರು ಪಂಡಿತ ದೇವೀಪ್ರಸಾದ. ನಾವಿಬ್ಬರೂ ಸೀತಾಪುರದಲ್ಲಿಯ ಪಂಡಿತ ಶಂಭುಪ್ರಸಾದನ ಮಕ್ಕಳು. ನಮ್ಮ ತಂದೆಯು

ಜ್ಯೋತಿಃಶಾಸ್ತ್ರದಲ್ಲಿ ಅತ್ಯಂತ ನಿಪುಣನಿದ್ದನು. ಇಡಿ ಪ್ರಾಂತದಲ್ಲಿ ಆತನ ಸಮಾನಸ್ಕಂಧರು ಯಾರೂ ಇದ್ದಿಲ್ಲವೆಂದು ಹೇಳಬಹುದು. ಮೊದಲಿನ ಅಯೋಧ್ಯೆಯ ನವಾಬನಾದ ಸಾದತಅಲ್ಲಿಯು ದೈವವಶದಿಂದ ದೇಶಭ್ರಷ್ಟನಾಗಿ ಕಾಲ ಕಳೆಯುತ್ತಿರುವಾಗ, ಆತನು ಒಮ್ಮೆ ನಮ್ಮ ತಂದೆಯ ಹತ್ತರ ಬಂದು, ತನ್ನ ಭವಿಷ್ಯತ್ಕಾಲದ ಫಲಾಫಲವನ್ನು ನಿವೇದಿಸಬೇಕೆಂದು ಹೇಳಿಕೊಳ್ಳಹತ್ತಿದನು. ಆ ಬಗ್ಗೆ ನಮ್ಮ ತಂದೆಯು ಗಣಿತವನ್ನು ಮಾಡಿ:“ಅಯೋಧ್ಯೆಯ ಸಿಂಹಾಸನವು ನಿನಗೆ ನಿಶ್ಚಯವಾಗಿ ಪ್ರಾಪ್ತವಾಗುವದು” ಎಂದು ಭವಿಷ್ಯವನ್ನು ಹೇಳಿದನು. ಸುದೈವದಿಂದ ಮುಂದೆ ಸಾದತಅಲ್ಲಿಗೆ ನಿಜವಾಗಿಯೇ ಅಯೋಧ್ಯೆಯ ಸಿಂಹಾಸನವು ಪ್ರಾಪ್ತವಾಯಿತು. ಸಾದತಅಲ್ಲಿಯು ಪಟ್ಟಕ್ಕೆ ಕುಳಿತ ಮೇಲೆ ತುಸ ದಿವಸಗಳಲ್ಲಿಯೇ, ಕೃತಜ್ಞತೆಯಿಂದ ನಮ್ಮ ತಂದೆಗೆ ಒಂದು ಜಹಾಗಿರಿಯನ್ನು ಕೊಟ್ಟು ಅದಕ್ಕೆ ತೆರಿಗೆಯನ್ನು ಸೂಟಬಿಟ್ಟನು; ಆದರೆ ಸಾದತಅಲ್ಲಿಯ ತರುವಾಯ ಪಟ್ಟಕ್ಕೆ ಬಂದ ಗಾಝೀಉದ್ದೀನ ಹೈದರನ ಆಡಳಿತೆಯಲ್ಲಿ ಸೀತಾಪುರ ಪರಗಣೆಯ ತಾಲೂಕದಾರನಾದ ಇಬ್ರಾಹೀಮಖಾನನು ಸೂಟ ಬಿಟ್ಟ ಜಹಾಗಿರಿಯ ಏಳು ವರುಷದ ತೆರಿಗೆಯನ್ನು ಒಮ್ಮೆಲೆ ಬೇಡಹತ್ತಿದನು. ಏನು ಮಾಡಬೇಕು? ನಾವಂತೂ ಬ್ರಾಹ್ಮಣರು. ಏಳು ವರುಷದ ತೆರಿಗೆಯನ್ನು ಎಲ್ಲಿಂದ ಕೊಡಬೇಕು? ನಮ್ಮ ಕಡೆಯಿಂದ ತೆರಿಗೆಯು ವಸೂಲಾಗಲಿಲ್ಲೆಂಬ ನೆವವನ್ನು ಮುಂದೆ ಮಾಡಿ, ದುರಾಚಾರಿಯಾದ ನೀಚ ತಾಲೂಕದಾರನು ನಮ್ಮ ಮನೆಯಲ್ಲಿಯ ಹೆಂಗಸರ ಮೇಲೆಯೂ, ನನ್ನ ಇಬ್ಬರು ತರುಣ ಹುಡಿಗೆಯರ ಮೇಲೆಯೂ ಅತ್ಯಂತ ಘೋರ ಅತ್ಯಾಚಾರವನ್ನು ಮಾಡಿದನು! ಅಯ್ಯೋ! ಆ ಘೋರ ಅನಾಚಾರದ ಸ್ಮರಣವಾದ ಕೂಡಲೆ ನನ್ನ ಎದೆಯು ಒಡೆದು ಹೋಗುತ್ತದೆ ಸರ್ವಾಂಗವು ಉರಿಯುತ್ತದೆ! ಪಾಪ! ನನ್ನ ಸ್ತ್ರೀಯು ನಿರಪರಾಧಿನಿಯು! ನನ್ನ ಅತ್ತಿಗೆಯು ನನ್ನ ಇಬ್ಬರು ತರುಣ ಮಕ್ಕಳೂ ನಿರಪರಾಧಿಗಳು!! ಅವರು ತಮ್ಮ ಜನ್ಮದಲ್ಲಿ ಒಂದು ಕಡ್ಡಿಯಷ್ಟು

ಕೂಡ ಅನ್ಯಾಯವನ್ನು ಮಾಡಿದ್ದಿಲ್ಲ. ಹಾಯ್! ಹಾಯ್!! ದೇವಾ!!! ಮನುಷ್ಯರೇ ಮನುಷ್ಯರ ಮೇಲೆ ಇಂಥ ಘೋರ ಅತ್ಯಾಚಾರವನ್ನು ಮಾಡಬೇಕೊ? ಸಾಹೇಬರೇ, ನೀವು ಈ ಠಕ್ಕರಿಗೆ ದೇಹಾಂತ ಶಿಕ್ಷೆಯನ್ನು ವಿಧಿಸುತ್ತೀರಿ; ಆದರೆ ಈ ಠಕ್ಕರು ಎಂದೆಂದಿಗೂ ಸ್ತ್ರೀಯರನ್ನು ಅವಮಾನಗೊಳಿಸುವದಿಲ್ಲ; ಅವರನ್ನು ಭ್ರಷ್ಟರನ್ನಾಗ ಮಾಡುವದಿಲ್ಲ! ಕುತ್ತಿಗೆಗೆ ಉರುಲು ಹಾಕಿ ಅವರ ಪ್ರಾಣವನ್ನು ಮಾತ್ರ ತೆಗೆದುಕೊಳ್ಳುತ್ತಾರೆ! ಆ ನರಾಧಮನಾದ ಇಬ್ರಾಹಿಮಖಾನನು ನಿರಪರಾಧಿಗಳಾದ ನನ್ನ ತರುಣ ಹುಡಿಗೆಯರ ಕೊರಳಿಗೆ ಉರುಲು ಹಾಕಿ ಅವರ ಪ್ರಾಣವನ್ನು ತೆಗೆದುಕೊಂಡಿದ್ದರೆ, ನನಗೆ ಇಷ್ಟು ದುಃಖವಾಗುತ್ತಿರಲಿಲ್ಲ! ಒಂದು ರೀತಿಯಿಂದ ತಿರುಗಿ ಆತನ ಉಪಕಾರವನ್ನೇ ಸ್ಮರಿಸುತ್ತಿದ್ದೆನು!! ಸಾಹೇಬರೇ, ತಾವು ಪ್ರತ್ಯಕ್ಷ ಹೋಗಿ ನೋಡಿ ಬರ್ರಿ ಶರಯೂ ನದಿಯ ಮಡುವಿನಲ್ಲಿ ನನ್ನ ಇಬ್ಬರು ತರುಣ ಹುಡಿಗೆಯರ ಎಲವುಗಳು ಇನ್ನೂ ತಮ್ಮ ಕಲಂಕವನ್ನು ತೊಳೆಯುತ್ತಿರಬಹುದು! ನೂರಾರು ಬ್ರಾಹ್ಮಣ ಸ್ತ್ರೀಯರ ಕಲಂಕವನ್ನು ಶರಯೂ ನದಿಯು ತನ್ನ ಹೊಟ್ಟೆಯಲ್ಲಿ ಹಾಕಿಕೊಂಡಿರಬಹುದು!!

ಹಿಂದಿನ ಘೋರಪ್ರಸಂಗದ ಸಂಸ್ಮರಣದಿಂದಲೂ, ಮಾತಾಡುವ ಶ್ರಮದಿಂದಲೂ ವಿಕಲಿತನಾದ ಬ್ರಾಹ್ಮಣನು ಮೂರ್ಛೆ ಬಂದು, ಕೆಲ ಹೊತ್ತು ಶವದಂತೆ ಅಚೇತನನಾಗಿ ದೊಪ್ಪನೆ ಬಿದ್ದುಬಿಟ್ಟನು!

ಬ್ರಾಹ್ಮಣನ ವೃತ್ತಾಂತವನ್ನು ಮನಗೊಟ್ಟು ಕೇಳಿದ, ಆ ತರುಣ ಬೈರಾಗಿಯ ಮನಃಸ್ಥಿತಿಯು, ಭಯಂಕರ ತುಫಾನವೆದ್ದ ಮಹಾಸಾಗರದಂತೆ ಅಲ್ಲೋಲ-ಕಲ್ಲೋಲವಾಗಿ ಹೋಯಿತು!! ಒಂದು ಕ್ಷಣದಲ್ಲಿ ಆತನು ಸಂತಾಪಯುಕ್ತನಾದರೆ, ಮತ್ತೊಂದು ಕ್ಷಣದಲ್ಲಿ ಆತನು ಅನಿವಾರ ಚಿಂತಾಯುಕ್ತನಾಗುತ್ತಿದ್ದನು ಒಂದು ನಿಮಿಷದಲ್ಲಿ ಆಶೆ ತಾಳುತ್ತಿದ್ದರೆ, ಮತ್ತೊಂದು ನಿಮಿಷದಲ್ಲಿ ವೈರಾಗ್ಯವನ್ನು ತಳೆಯುತ್ತಿದ್ದನು. ಒಂದು ಪಳದಲ್ಲಿ ಗಂಭೀರನಾಗುತ್ತಿದ್ದರೆ

ಇನ್ನೊಂದು ಪಳದಲ್ಲಿ ಸೇಡು ತೀರಿಸಿಕೊಳ್ಳಬೇಕೆಂದು ನಿಶ್ಚಯಿಸು ತ್ತಿದ್ದನು. ಬ್ರಾಹ್ಮಣನ ಹೃದಯವಿದಾರಕ ವೃತ್ತಾಂತವನ್ನು ಕೇಳುತ್ತ ಸಾಗಿದಂತೆ ತರುಣನ ಮುಖಮುದ್ರೆಯಲ್ಲಿ ಹೀಗೆ ಕ್ಷಣ ಕ್ಷಣಕ್ಕೆ ಬದಲಾವಣೆಗಳಾಗುತ್ತ ಸಾಗಿದ್ದವು ಬ್ರಾಹ್ಮಣನ ಮೃತ್ಯು ಸಮಯದ ಹೀನಸ್ಥಿತಿಯನ್ನು ನೋಡಿ ತರುಣನ ಕಂಬನಿಗಳು ಅವಿರ ಲವಾಗಿ ಸುರಿಯಹತ್ತಿದ್ದವು!

ನ್ಯಾಯಾಧೀಶನಾದ ಉಯಿಲ್ಸನ್ನ ಸಾಹೇಬನು ಬಹು ದಯಾ ಳುವಿದ್ದನು. ತನ್ನ ಸೇವಕರಿಗೆ ಬ್ರಾಹ್ಮಣನ ನೆತ್ತಿಗೆ ನೀರು ಬಡಿದು ಉಪಚರಿಸಿರೆಂದು ಹೇಳಿದನು. ಸುಮಾರು ಹಿಂದೆರಡು ಗಳಿಗೆಗಳ ವರೆಗೆ ಹೀಗೇ ಪ್ರಯತ್ನಪೂರ್ವಕ ಉಪಚರಿಸಿದ ಬಳಿಕ, ಬ್ರಾಹ್ಮ ಣನು ತುಸ ದೇಹಸ್ಮೃತಿಯ ಮೇಲೆ ಬಂದು, ಕ್ಷೀಣಸ್ವರದಿಂದ ಪುನಃ ತನ್ನ ವೃತ್ತಾಂತವನ್ನು ಹೇಳತೊಡಗಿದನು:—"ಸಾಹೇಬರೇ, ತಮ ಗಾದರೂ ಮಕ್ಕಳು-ಮರಿಗಳು ಇರಬಹುದು. ಅಪತ್ಯಸ್ನೇಹವೆಂದ ರೇನು? ಎಂಬದು ತಮಗೂ ಗೊತ್ತಿರಬಹುದು. ಅಧಮಾಧಮ ನಾದ ಇಬ್ರಾಹಿಮಖಾನನು ನಮ್ಮ ಹೆಂಡರು-ಮಕ್ಕಳ ಮೇಲೆ ಘೋರತರ ಅತ್ಯಾಚಾರ ಮಾಡಿದ್ದನ್ನು ನೋಡಿ, ನಮ್ಮ ಅಂತಃಕರ ಣವು ಕಮರಿತು; ಅಪತ್ಯಸ್ನೇಹವು ಮಾಯವಾಯಿತು. ಆಗ, ಪ್ರೇಮಾಂತಃಕರಣಗಳು ಕಮರಿ ಕಪ್ಪಾಗಿ ಹೋಗಿದ್ದ ನಾವಿಬ್ಬರು ಅಣ್ಣ-ತಮ್ಮಂದಿರು ನಮ್ಮ ಹೆಂಡಿರು-ಮಕ್ಕಳಿಗೆ ಹೇಳಿದ್ದೇನಂದರೆ:- "ದೇಶವೆಲ್ಲ ಪಾಪಪಂಕದಲ್ಲಿ ಮುಳುಗಿ ಹೋಗಿರುವದು; ಅಧರ್ಮದ ಸಾಮ್ರಾಜ್ಯವು ಪಸರಿಸಿರುವದು. ಪರಮಾತ್ಮನೇ ನಮ್ಮ ದೇಶದ ಮೇಲೆಯೂ, ನಮ್ಮ ಮೇಲೆಯೂ ರುಷ್ಟನಾಗಿರುತ್ತಾನೆ. ಕಾರಣ ನೀವೆಲ್ಲರೂ ಹೋಗಿರಿ; ಶರಯೂವಿನ ಮಡುವನ್ನು ಆಶ್ರಯಿಸಿರಿ! ಶರಯೂವು ನಿಮ್ಮ ಜೀವನದ ಕಲಂಕವನ್ನು ತೊಳೆಯಲಾಪಳು!! ನಿಮ್ಮ ಲಜ್ಜೆಯನ್ನೂ, ಅಪಮಾನವನ್ನೂ ನಿವಾರಣ ಮಾಡಲಿಕ್ಕೆ ಅವಳೇ ಸಮರ್ಥಳು. ನಮ್ಮ ಉಪದೇಶದಂತೆ ನಾಲ್ವರೂ ಸ್ತ್ರೀಯರು

ಶರಯೂವಿನ ನದಿಯಲ್ಲಿ ಹಾರಿಕೊಂಡು, ಮ್ಲೇಂಛರ ಅಂಗಸ್ಪರ್ಶ ವೆಂಬ ಮಹತ್ಪಾತಕದ ಪ್ರಾಯಶ್ಚಿತ್ತವನ್ನು ತೆಗೆದುಕೊಂಡರು! ಇಂತು ನಾವಿಬ್ಬರೂ ಅಣ್ಣತಮ್ಮಂದಿರು ಬಳಗವನ್ನೆಲ್ಲ ಪರಮೇಶ್ವರನ ನಿರಾತಂಕ ಸಾಮ್ರಾಜ್ಯದಲ್ಲಿ ದೂಡಿ, ಸಂಸಾರಬಂಧನವನ್ನು ಹಿಮ್ಮೆ ಪರಿತ್ಯಜಿಸಿದೆವು. ನನ್ನ ಅಣ್ಣನಾದ ದೇವೀಪ್ರಸಾದನು ಪರಮ ಧಾರ್ಮಿಕನೂ, ಸತ್ಸಂಗದ ಮಹತ್ವವನ್ನು ಚನ್ನಾಗಿ ಅರಿತವನೂ ಇದ್ದ ಮೂಲಕ, ಸಾಧು-ಸಂತರ, ಮುನಿ-ಯೋಗಿಗಳ ಸಹವಾಸ ಮಾಡಬೇಕೆಂದು ಹಿಮಗಿರಿಯ ಕಡೆಗೆ ನಡೆದನು ಆತನು ನನಗೂ ತನ್ನ ಸಂಗಡ ಬರಲಿಕ್ಕೆ ತಿಳಿಸಿದನು ನನ್ನ ದುರ್ಬುದ್ಧಿಯು-ದುರ್ದೈವವು ನನಗೆ ಹಾಗೆ ಹೋಗಗೊಡಲಿಲ್ಲ! ದುಷ್ಟ ಇಬ್ರಾಹಿಮಖಾನನ ನಿಂದ್ಯಕೃತಿಯ ಸೇಡುತೀರಿಸಿಕೊಳ್ಳಬೇಕೆಂಬ ದುರಾಶೆಯು ನನ್ನಲ್ಲಿ ಪ್ರಜ್ವಲಿಸಿತು; ಆದರೆ ಈ ದುರ್ವಾಸನೆಯ ಪೂರ್ಣತೆಯಾಗುವ ಬಗೆ ಹೇಗೆ? ಒಂದೂ ಉಪಾಯವು ತೋಚಲೊಲ್ಲದು ಎಷ್ಟೋ ದಿವಸ ಹೀಗೆ ಉದ್ದಿಷ್ಟ ಉಪಾಯಗಾಣದೆ ಪರಿಭ್ರಮಿಸಿದ ಬಳಿಕ, ಕೊನೆಗೆ ಒಂದು ವಿಚಾರವು ನನ್ನ ಮನದಲ್ಲಿ ಹೊಳೆಯಿತು ಠಕ್ಕರ ಗುಂಪಿನಲ್ಲಿ ಸೇರಿ ಒಮ್ಮೆಲ್ಲೊಮ್ಮೆ ಅವರ ಸಹಾಯದಿಂದಲಾದರೂ ಸೇಡು ತೀರಿಸಿಕೊಳ್ಳಬೇಕೆಂಬ ಬುದ್ಧಿಯಿಂದ ಪ್ರೇರಿತನಾದೆನು; ಆದರೆ ಸಾಹೇಬರೇ, ದುರ್ಬುದ್ಧಿಯು ಮನುಷ್ಯನನ್ನು ಮತ್ತಿಷ್ಟು ದುಃಖ-ಕಷ್ಟಗಳ ಕಡೆಗೇ ಎಳೆದೊಯ್ಯುತ್ತದಷ್ಟೇ? ನಾನು ಠಕ್ಕ ಜನರ ಗುಂಪಿನಲ್ಲಿ ಸೇರಿದ ಕೆಲದಿನಗಳಲ್ಲಿಯೇ ಈ ಠಕ್ಕ ಜನರು ದಿಲ್ಲಿಯ ಹತ್ತರ ನದಿಯ ದಂಡೆಯ ಮೇಲೆ ಒಂದು ದಿವಸ ಮೂರೂಸಂಜೆಯ ಮುಂದೆ ಇಬ್ಬರು ಗಂಡಸರನ್ನೂ, ಒಬ್ಬ ಹೆಂಗಸನ್ನೂ ಕೊಂದು, ಒಂದು ಮೂರು-ನಾಲ್ಕು ವರ್ಷದ ಹುಡಿಗೆಯನ್ನು ಮಾತ್ರ ಎತ್ತಿಕೊಂಡು ನಡೆದರು ಮಾರನೆ ದಿವಸ ಮುಂಜಾನೆ ನದಿಯ ದಂಡೆಯ ಮೇಲೆ ಬಿದ್ದ ಪ್ರೇತಗಳನ್ನು ನೋಡಿ, ನನ್ನ ಎದೆಯೊಡೆದು ನೀರಾಯಿತು. ಶವಗಳನ್ನು ನೋಡಿದ ಕೂಡಲೆ ಅವು ಯಾರವಿರಬಹುದೆಂ

ಬದನ್ನು ನಾನು ಕೂಡಲೆ ಗುರ್ತಿಸಿದೆನು. ಅವು ನನ್ನ ಬೀಗನಾದ ಶಾಂತಾಪ್ರಸಾದನ ಮತ್ತು ಆತನ ಮಗನಾದ ಅಯೋಧ್ಯಾನಾಥನ ಶವಗಳಿದ್ದವು! ನನ್ನ ಶೋಕಕ್ಕೆ ಪಾರಾವಾರವೇ ಇಲ್ಲದಂತಾಯಿತು. ಎಷ್ಟೋ ಹೊತ್ತಿನ ವರೆಗೆ 'ಶಾಂತಾಪ್ರಸಾದ-ಶಾಂತಾಪ್ರಸಾದ, ಅಯೋಧ್ಯಾನಾಥ-ಅಯೋಧ್ಯಾನಾಥ! ಎಂಥ ವಿಪತ್‌ಸ್ಥಿತಿಯಿದು!' ಎಂದು ಹಂಬಲಿಸಿ ಹಲುಬಿದೆನು; ಮೊದಲಿನ ಶೋಕಾವೇಗವು ಕಡಿಮೆಯಾದ ಮೇಲೆ, ನಾನು ಇಲ್ಲಿ ಶೋಕ ಮಾಡುತ್ತ ಹೀಗೆ ಕುಳಿತಿರುವದನ್ನು ಯಾರಾದರೂ ಠಕ್ಕರು ನೋಡಿದರೆ, ನನ್ನ ಗತಿಯು ಹೀಗೆ ತಾಗಲಿಕ್ಕಿಲ್ಲೆಂದು ತಿಳಿದು, ಸಮೀಪದಲ್ಲಿಯೇ ಒಂದು ಗಿಡದ ಬುಡದಲ್ಲಿ ದಿಙ್ಮೂಢನಾಗಿ ಕುಳಿತೆನು

ಸಾಹೇಬ: — "ಮುಂದೇನಾಯಿತು?"

"ಸಾಹೇಬರೇ, ದೈವಗತಿಯು ವಿಚಿತ್ರವಲ್ಲವೇ? ದಯಾಳು ಪರಮಾತ್ಮನು ನನ್ನ ಅಳಿಯನನ್ನು-ಅಯೋಧ್ಯಾನಾಥನನ್ನು-ತಿರುಗಿ ಈ ಮೃತ್ಯುಲೋಕಕ್ಕೆ ಕಳಿಸಿದಂತೆ ತೋರಿತು. ಇಷ್ಟೊತ್ತಿನ ವರೆಗೆ ಅಚೇತನ ಸ್ಥಿತಿಯಲ್ಲಿ ಬಿದ್ದಿದ್ದ ಆತನು ಮೆಲ್ಲಗೆ ತನ್ನ ಕೈಕಾಲುಗಳನ್ನು ಎಳಕೊಳ್ಳಹತ್ತಿದನು. ಮುಂದೆ ಸ್ವಲ್ಪ ವೇಳೆಯಲ್ಲಿ ಮುಂಜಾವಿನ ತಂಗಾಳಿಯಿಂದ ಅಯೋಧ್ಯಾನಾಥನು ಪೂರ್ಣ ಎಚ್ಚತ್ತು ಎದ್ದು ಕುಳಿತನು. ತಂದೆಯ ದುರ್ಮರಣವನ್ನು ನೋಡಿ, ಬಹಳ ಆಕ್ರೋಶವನ್ನು ಮಾಡಹತ್ತಿದನು ಆ ಅಳಿಯನ ದುಃಖವನ್ನು ನೋಡಿ ನನ್ನ ದುಃಖವು ಹೆಚ್ಚರಿಸಿತು. ಒಂದೇಸವನೆ ಕಂಬನಿಗಳನ್ನುದುರಿಸುತ್ತ ಭ್ರಾಂತಿಷ್ಟನಂತೆ ಸುಮ್ಮನೆ ಕುಳಿತು ಬಿಟ್ಟೆನು. ಶೋಕಾವೇಶವು ಹಿಮ್ಮೆಟ್ಟಿದ ಬಳಿಕ ಅಯೋಧ್ಯಾನಾಥನು ತಂದೆಯ ಪ್ರೇತವನ್ನು ಯಮುನಾರ್ಪಣವನ್ನಾಗ ಮಾಡಿ, ತಾನೂ ಆತ್ಮವನ್ನು ತೊಲಗಬೇಕೆಂದು ನಿಶ್ಚಯಿಸಿ, ಒಂದು ಬಂಡೆಗಲ್ಲಿನ ಮೇಲೆ ಇಹಲೋಕದ ಯಾತ್ರೆಯನ್ನು ಮುಗಿಸಲಿಕ್ಕೆ ಸಜ್ಜಾಗಿ ನಿಂತನು! ಆ ಮೇಲೆ ಮಾತ್ರ ನನ್ನಿಂದ ಧೈರ್ಯವನ್ನು ತಾಳುವದಾಗಲಿಲ್ಲ. ಆಗ

ನಾನು ಚಟ್ಟನೆ ಎದ್ದು ಹೋಗಿ, ಆತನನ್ನು ಸಂತೈಸಿ, ಆತ್ಮಹತ್ಯೆಯೆಂಬ ಮಹಾಪಾತಕದಿಂದ ಆತನನ್ನು ಉಳಿಸಿದೆನು. ತರುವಾಯ ನಾನು ಆತನನ್ನು ಊರೊಳಗೆ ಕರಕೊಂಡು ಹೋಗಿ, ಸಭ್ಯದಾರಿಕಾರರ ಸಂಗಡ ಆತನನ್ನು ಸೀತಾಪುರಕ್ಕೆ ಕಳಿಸಿದೆನು. ಸಾಹೇಬರೇ! ಇಷ್ಟಕ್ಕೇ ನನ್ನ ಕರ್ಮಕಥೆಯು ಮುಗಿಯಲಿಲ್ಲ. ತರುವಾಯ ನನಗೆ ಶಾಂತಾಪ್ರಸಾದನ ಮಗಳ ಚಿಂತೆಯು ಹತ್ತಿತು. ಏನು ಮಾಡಬೇಕು? ಪ್ರತ್ಯಕ್ಷ ಸೋದರಸೊಸೆಯು ಠಕ್ಕರೆಂಬ ಕ್ರೂರಪಶುಗಳ ದವಡೆಯಲ್ಲಿ ಸಿಕ್ಕಿರುತ್ತಾಳೆ; ನಾನೂ ಅವರ ಸಹಚಾರಿಯಿರುತ್ತೇನೆ; ಪ್ರತ್ಯಕ್ಷ ಇದೇ ಕಣ್ಣಳಿಂದ ಸೊಸೆಯ ದುಃಸ್ಥಿತಿಯನ್ನು ನೋಡುತ್ತೇನೆ; ಆದರೆ ಯಾವ ಉಪಾಯವನ್ನು ಮಾಡಬೇಕೆಂಬದು ಹೊಳೆಯಲೊಲ್ಲದು! ನನ್ನ ಮನದಲ್ಲಿಯ ವಿಚಾರವನ್ನಂತೂ ಉಳಿದವರಿಗೆ (ಠಕ್ಕರಿಗೆ) ಹೇಳುವಂತಿಲ್ಲ ಹೇಳಿದರೆ ನನ್ನ ನೂರು ವರುಷಗಳು ತುಂಬಿದವೆಂದೇ ತಿಳಿಯಬೇಕು; ಏನು ಮಾಡಲಿ! ಇತ್ಯಾದಿ ವಿಚಾರತರಂಗಗಳಲ್ಲಿ ನಾನು ಮಗ್ನನಾಗಿರುವಷ್ಟರಲ್ಲಿ ಯಾವನೋ ಒಬ್ಬ ಸಾಹೇಬನು ನಮ್ಮನ್ನು ಹಿಡಿಯುವ ಸಲುವಾಗಿ ನನ್ನ ಬೆನ್ನಟ್ಟಿ ಬರುತ್ತಿರುವದು ಗೊತ್ತಾಯಿತು. ಕೂಡಲೆ ನಾವೆಲ್ಲರೂ ಪ್ರಾಣಾಪಾಯದ ಭಯದಿಂದ ನಮ್ಮ ಕಾಲಿಗೆ ಬುದ್ಧಿ ಹೇಳಿದೆವು. ಸಾಹೇಬನ ಸಿಪಾಯಿಗಳು ಈ ಅಮರೀ ಜಮಾದಾರಳನ್ನು ಮಾತ್ರ ಹಿಡಿದರು. ಅವಳ ಹತ್ತರಿದ್ದ ಶಾಂತಾಪ್ರಸಾದನ ಮಗಳನ್ನು ಸಾಹೇಬನು ಕಾನಪುರಕ್ಕೆ ತೆಗೆದುಕೊಂಡು ಹೋದನು; ಮುಂದೆ ಆ ಹುಡಿಗೆಯನ್ನು ಜಯಪಾಲಸಿಂಹನೆಂಬ ಸದ್ಗೃಹಸ್ಥನು ಸಾಹೇಬನ ಕಡೆಯಿಂದ ಇಸಗೊಂಡು ತನ್ನ ಹೊಟ್ಟೆಯ ಮಗಳಂತೆ ಜೋಪಾನ ಮಾಡಿ, ಒಬ್ಬ ಬ್ರಾಹ್ಮಣಕುವರನಿಗೆ ಮದುವೆ ಮಾಡಿ ಕೊಟ್ಟನಂತೆ! ಈಗೆರಡು ಮೂರು ವರ್ಷಗಳಿಂದ ನಾನು ಈ ಠಕ್ಕರ ಸಹವಾಸವನ್ನು ಬಿಟ್ಟು, ಸಂನ್ಯಾಸಿಯ ವೇಷದಿಂದ ದೇಶದ ತುಂಬೆಲ್ಲ ತಿರುಗುತ್ತಿದ್ದೆನು. ಆದರೂ ಇಬ್ರಾಹಿಮಖಾನನ ಸೇಡು ತೀರಿಸಿಕೊಳ್ಳ

ಬೇಕೆಂಬ ನನ್ನ ವಾಸನೆಯು ಮಾತ್ರ ಅಣುಮಾತ್ರವೂ ಕುಂದಿದ್ದಿಲ್ಲ ಆದರೆ ಆ ಅಧಮಾಧಮನಾದ ಇಬ್ರಾಹಿಮುಖಾನನು ನಮ್ಮ ಸೀತಾಪುರದ ನಾರಾಯಣ ಕುಮಾರಿಯು ಖಡ್ಗಕ್ಕೆ ಮೊನ್ನೆ ಮೊನ್ನೆ ಆಹುತಿಯಾದನೆಂಬದು ನನ್ನ ಕಿವಿಗೆ ಮುಟ್ಟಿತು ಈ ಸುವಾರ್ತೆಯು-ಅಮೃತತುಲ್ಯಪ್ರಸಂಗವು ಸಟಿಯೋ-ದಿಟವೋ ಎಂಬದನ್ನು ನಿರ್ಣಯಿಸಿ ಮನದ ದುಗುಡನ್ನು ನಾಶಗೊಳಿಸಬೇಕೆಂದು ಈ ಸಂನ್ಯಾಸಿಯ ವೇಷದಿಂದಲೇ ಸೀತಾಪುರದ ಕಡೆಗೆ ಹೊರಟಿದ್ದೆನು ಅಷ್ಟರಲ್ಲಿ ತಮ್ಮ ಶಿಪಾಯಿಗಳು ನಾನು ಠಕ್ಕನಿರಬಹುದೆಂದು ನನ್ನನ್ನು ಹಿಡಿದು ಇಲ್ಲಿಯ ವರೆಗೆ ಎಳೆತಂದರು ಸಾಹೇಬರೇ, ತೀರಿತು; ನನ್ನ ಕರ್ಮಕಥೆಯು! ನಾನೇನು ಠಕ್ಕನಲ್ಲ; ಕಳ್ಳನಲ್ಲ; ಎಡ್ಡನಲ್ಲ ಆದರೂ ನಾನು ಸರ್ವ ಪಾಪಿಗಳಿಗಿಂತ ಪಾಪಿಷ್ಠನೆಂಬದು ಮಾತ್ರ ನಿಜವು. ಕಾರಣ ನನ್ನನ್ನು ದ....ಯ....ಮಾ....ಡಿ....ಗ....ಲ್ಲಿ....ಗೆ ಹಾ....''

ಮುಂದೆ ಮಾತಾಡುವಷ್ಟು ಸಾಮರ್ಥ್ಯವು ಬ್ರಾಹ್ಮಣನಲ್ಲಿ ಉಳಿಯಲಿಲ್ಲ. ಇಷ್ಟು ಮಾತಾಡಿದ್ದಕ್ಕೇ ಆತನು ಶ್ರಾಂತನಾಗಿ ನಿಶ್ಚೇಷ್ಟಿತನಾದನು. ತುಸ ಹೊತ್ತಿನಲ್ಲಿ ಆತನಿಗೆ ಶ್ವಾಸವು ಹತ್ತಿ ಬಾಯೊಳಗಿಂದ ಬುರುಗು ಬರಹತ್ತಿತು. ನಾಲಿಗೆಯು ಕಪ್ಪಿಟ್ಟಿತು; ಕೈ-ಕಾಲುಗಳು ತಣ್ಣಗಾಗುತ್ತ ನಡೆದವು.

ಬ್ರಾಹ್ಮಣನ ಕರ್ಮಕಥೆಯನ್ನು ಕೇಳಿ, ಕಂಬನಿಗಳನ್ನುದುರಿಸುತ್ತ ನಿಂತಿದ್ದ ತರುಣ ಬೈರಾಗಿಯ ಮನಃಸ್ಥಿತಿಯು ಅತ್ಯಂತ ಕರುಣಾಜನಕವಾಯಿತು ಆತನ ಅಂತಃಕರಣವು ಶೂನ್ಯಾಕಾರವಾಗಿ ಹೋಗಿತ್ತು. ಕಂಠವು ಬಿಗಿದು ನೇತ್ರಗಳೊಳಗಿಂದ ಹಿಂದೇಸವನೆ ದುಃಖಾಶ್ರುಗಳು ಧಾರೆಗಟ್ಟಿ ಹರಿದದ್ದರಿಂದ, ಆತನ ಕಫನಿಯು ತೊಯ್ದು ಹೋಗಿತ್ತು ದುಃಖಾತಿರೇಕದಿಂದ ಆತನ ದೇಹಭಾನವು ಹಾರಿತು. ಇಲ್ಲಿಯ ವರೆಗೆ ಹತ್ತಿಕ್ಕಿದ್ದ ದುಃಖವನ್ನು ಇನ್ನು ಮಾತ್ರ ತಡೆಯುವದಾಗಲೊಲ್ಲದು. ತಾನು ಕೋರ್ಟಿನಲ್ಲಿರುವೆನೆಂಬ ಅರಿವು ಸಹ ಉಳಿಯದೆ, ಆತನು ಹಿಮ್ಮಿಂದೊಮ್ಮೆ ಬ್ರಾಹ್ಮಣನ ಹಾಸಿ

ಗೆಯ ಹತ್ತರ ಓಡಿ ಹೋಗಿ "ಮಾವಾ-ಮಾವಾ! ಇಗೋ ಇತ್ತ ನೋಡು, ನಿನ್ನ ದುರ್ದೈವಿ ಅಳಿಯನಾದ ಅಯೋಧ್ಯಾನಾಥನು ಇಲ್ಲಿ ಇರುವನು!" ಎಂದು ನುಡಿದು ಮಾವನ ಎದೆಯ ಮೇಲೆ ತನ್ನ ಕಂಬನಿಗಳನ್ನು ದರಿಸಹತ್ತಿದನು ಆದರೆ ಬಲದೇವ ಪ್ರಸಾದನಿಗೆ ಮಾತಾಡುವಷ್ಟು ಶಕ್ತಿಯು ಆಗ್ಗೆ ಉಳಿದಿದ್ದಿಲ್ಲ ಒಮ್ಮೆ ಕಣ್ಣು ತೆಗೆದು ಅಳಿಯನಾದ ಅಯೋಧ್ಯಾನಾಥನನ್ನು ಕಣ್ಣು ತುಂಬ ನೋಡಿದನು ಮಾತ್ರ. ತೀರಿತು; ಬಲದೇವಪ್ರಸಾದನ ಇಹಯಾತ್ರೆಯು ಮುಗಿಯಿತು! ಸಂಸಾರ ತಾಪದಿಂದ ಅಂತೂ-ಇಂತೂ ಒಮ್ಮೆ ಆತನು ಶಾಶ್ವತವಾಗಿ ಮುಕ್ತನಾದನು!!

ಸೋದರಮಾವ—ಅಳಿಯಂದಿರ ಈ ಸ್ಥಿತಿಯನ್ನು ನೋಡಿ, ಕೋರ್ಟಿಗೆ ವಸ್ತುಸ್ಥಿತಿಯು ಝುಗ್ಗನೆ ಹೊಳೆಯಿತು. ಮೇಲಾಗಿ ಅಯೋಧ್ಯಾನಾಥನ ವಿರುದ್ಧವಾಗಿ ಸಾಕ್ಷಿಗಳಂತೂ ಇದ್ದಿಲ್ಲ ನ್ಯಾಯಾಧೀಶನು ತರುಣ ಬೈರಾಗಿಯಾದ ಅಯೋಧ್ಯಾನಾಥನನ್ನು ನಿರಪರಾಧಿಯೆಂದು ಬಿಟ್ಟುಕೊಟ್ಟನು ಅಯೋಧ್ಯಾನಾಥನು ಮಾವನ ಔರ್ಧ್ವದೇಹಿಕ ಕಾರ್ಯಗಳನ್ನು ಅತ್ಯಂತ ಭಕ್ತಿಯಿಂದಲೂ, ಶ್ರದ್ಧೆಯಿಂದಲೂ ನೆರವೇರಿಸಿ, ಕಾನಪುರದ ಹಾದಿಯನ್ನು ಹಿಡಿದನು

---

## ನಿರಾಶೆಯಲ್ಲಿ ಆಶೆ!

೨೦ ದಿನ ಪ್ರಕರಣದಲ್ಲಿ ಹೇಳಿದಂತೆ ಅಯೋಧ್ಯಾನಾಥನು ಕಾನಪುರಕ್ಕೆ ಹೋಗಿ ಅಲ್ಲಿ ಕೈಲಾಸೇಶ್ವರಿಯ ಶೋಧ ನಡಿಸಿದನು; ಈತನಿಗೆ ಆ ಬಾಲಿಕೆಯ ಸಂಗತಿಯನ್ನು ಹೇಳುವವರಾರು! ಕೆಲವು ಜನ ಕುಚೋದ್ಯಗಾರರು ಇಲ್ಲದ ಚೇಷ್ಟೆಯನ್ನು ಮಾಡಿದರು ವಿಪದ್ಗ್ರಸ್ತನಾದ ಅಯೋಧ್ಯಾನಾಥನು ಅವನ್ನು ಮೌನದಿಂದ ಸಹಿಸಿಕೊಂಡನು. ಊರಿಂದ ಮೇಲೆ ಒಬ್ಬನಾದರೂ ಸಜ್ಜನ ಮನುಷ್ಯನು ಸಿಕ್ಕೇ ಸಿಗುವನು. ಆದರಂತೆ ಒಬ್ಬ ಸಜ್ಜನನು ಅಯೋಧ್ಯಾನಾಥ

ನನ್ನು ಕಂಡು ಕಳವಳಗೊಂಡು ನುಡಿದನೇನಂದರೆ—"ತಮ್ಮಾ ನೀನು ಹೀಗೆ ತಿರುಗುತ್ತ ಹೋದರೆ, ನಿನ್ನ ಕೈಲಾಸೇಶ್ವರಿಯ ಭೆಟ್ಟಿಯು ನಿನಗೆ ಆಗಲಿಕ್ಕಿಲ್ಲ. ಒಬ್ಬರ ಹೆಸರನ್ನು, ಯಾರು ಕೇಳುತ್ತ ಕೂಡ್ರುವರು? ಕೆಲವು ವರ್ಷಗಳ ಹಿಂದೆ ಈ ಊರಿನ ಜಯಪಾಲ ಸಿಂಹನೆಂಬವನು ಒಬ್ಬ ಚಿಕ್ಕ ಬಾಲಿಕೆಯನ್ನು ಮಾತ್ರ ತಂದಿದ್ದನು. ಈ ಹುಡಿಗೆಯು ಠಕ್ಕರ ಕೈಯಲ್ಲಿ ಸಿಕ್ಕಿದ್ದು, ಸುದೈವದಿಂದ ಈಕೆಯು ನಮ್ಮ ಕೈಯಲ್ಲಿ ಸಿಕ್ಕಿರುವಳು, ಎಂದು ಆತನು ಅನ್ನುತ್ತಿದ್ದನು. ನೀನು ಜಯಪಾಲಸಿಂಹನ ಮನೆಗೆ ಹೋಗಿ ವಿಚಾರಿಸಿದರೆ, ಎಲ್ಲವೂ ತಿಳಿದು ಬರಬಹುದು"

ಈ ಮೇರೆಗೆ ಆ ಸಜ್ಜನನು ಹೇಳಲು, ಅಯೋಧ್ಯಾನಾಥನು ಸಂತಸಬಟ್ಟು, ಜಯಪಾಲನ ಮನೆಯನ್ನು ಕೇಳುತ್ತ ಹೋದನು. ಅಲ್ಲಿ ಆತನಿಗೆ ಬಂದಿಯಾದಾಸಿಯ ಭೆಟ್ಟಿಯಾಯಿತು. ಆಕೆಯನ್ನು ನೋಡಿ ಅಯೋಧ್ಯಾನಾಥನು:—'ತಾಯಿ, ಜಯಪಾಲಸಿಂಹನ ಮನೆಯು ಇದೆಯೋ?' ಎಂದು ಕೇಳಿದನು. ದಾಸಿಯು ಹೌದೆಂದು ಉತ್ತರ ಕೊಟ್ಟಳು

"ಜಯಪಾಲಸಿಂಹನು ಬಹು ದಿವಸಗಳಿಂದ ಜೋಪಾನ ಮಾಡಿದ ಹುಡಿಗೆಯು ಇರುವಳೋ?"

ದಾಸಿಯು ಬೆಟ್ಟಿ ಬಿದ್ದು, ಅಯೋಧ್ಯಾನಾಥನನ್ನು ಸೂಕ್ಷ್ಮ ವಾಗಿ ನೋಡಿದಳು. ಆ ಹುಡಿಗೆಯ ಮುಖಕ್ಕೂ ಆತನ ಮುಖಕ್ಕೂ ಬಹು ಸಾಮ್ಯವಿತ್ತು. ಆತನನ್ನು ಕಂಡ ಕೂಡಲೆ ಅವಳಲ್ಲಿ ಒಂದುತರದ ಪ್ರೇಮವುತ್ಪನ್ನವಾಗಿದ್ದಲ್ಲದೆ, ದುಃಖವೂ ಉಂಟಾಯಿತು. ಕೂಡಲೆ "ಅಯ್ಯೋ, ಆ ನನ್ನ ಸೀತೆಯು ನನ್ನ ಕೈ ಬಿಟ್ಟಳು" ಎಂದು ಅಳುತ್ತ ಅವಳು ಕುಸಿ ಕೂತಳು ಈ ಮುದಕಿಯನ್ನು ರಮಿಸಿ ಕೇಳಿದರೆ, ನನಗೆ ಅನುಕೂಲವಾದ ಸಂಗತಿಯು ತಿಳಿಯಬಹುದೆಂದು ಅಯೋಧ್ಯಾನಾಥನು ನೆನಸಿದನು. ಕೂಡಲೆ ಅವನು:—'ತಾಯಿ, ಹೀಗೆ ಅಳ ಬೇಡ. ಆ ಹುಡಿಗೆಯು ಎಲ್ಲಿ ಹೋಗಿರುವಳು?' ಎಂದು ಕೇಳಿದನು

ಆಗ ಅವಳು ಅಳುತ್ತ:—'ಸ್ವಾಮಿ, ನೀವು ಸಾಧು-ಸಜ್ಜನರಿದ್ದಂತೆ ಕಾಣುವದು. ನನ್ನ ಸೀತೆಯು ಪುನಃ ನನಗೆ ಭೆಟ್ಟಿಯಾಗಬಹುದೇ? ನೀವು ಭವಿಷ್ಯವನ್ನು ಹೇಳುವಿರಾ? ನಿಮಗೆ ಎರಡಾಣೆ ರೊಕ್ಕವನ್ನು ಕೊಡುವೆನು' ಎಂದು ನುಡಿದಳು.

ಮೇಲಿನ ಪ್ರಶ್ನೆಯನ್ನು ಕೇಳಿ ಅಯೋಧ್ಯಾನಾಥನು ಹಿನ್ನೊ ದೀರ್ಘವಾಗಿ ನಿಟ್ಟುಸುರು ಬಿಟ್ಟು 'ಇವಳು ಹೇಳುವ ಸೀತೆಯು ಕೈಲಾಸೇಶ್ವರಿಯೇ ಏನು? ಹೀಗಿದ್ದರೆ ಇಲ್ಲಿಯ ವರೆಗೆ ಮಾಡಿದ ಆಶಾಂಕುರವೆಲ್ಲ ಕಮರುವದೋ ಏನು?' ಮುಂತಾದ ಕಲ್ಪನೆಗಳು ಹಿಂದರ ಹಿಂದೊಂದು ಆತನ ಮನದಲ್ಲಿ ಬರತೊಡಗಿದವು. ಆಗ ಮನೋಧೈರ್ಯವನ್ನು ತಾಳಿ, ಮುದಕಿಯ ಮುಖದಿಂದಲೇ ನಿಜವಾದ ವೃತ್ತವನ್ನು ಹೊರಗೆಡವಬೇಕೆಂದು ಅವಳನ್ನು ಕುರಿತು:-"ನಿನ್ನ ಸೀತೆಯು ಯಾರು? ಅವಳಿಗೆ ಏನಾಗಿರುವದು?"

"ಸ್ವಾಮಿನ್, ಇತ್ತ ಮೇಲೆ ಬರ್ರಿ; ಕುಳಿತುಕೊಳ್ಳಿರಿ. ನಾನು ನಿಮಗೆ ಎಲ್ಲವನ್ನೂ ಸವಿಸ್ತರ ಹೇಳುತ್ತೇನೆ. ಆ ಮೇಲೆ ಹೊತ್ತಿಗೆಯನ್ನು ತೆಗೆದು ನೆಟ್ಟಗೆ ತಿಳಿದು ನೋಡಿ ಹೇಳಿರಿ, ನನ್ನ ಸೀತೆಯು ಎಂದು ತಿರುಗಿ ಬರುವಳೆಂಬದನ್ನು!"

"ನಿನ್ನ ಸೀತೆಗೆ ಏನಾಗಿರುವದು? ಅವಳು ಎಲ್ಲಿಗೆ ಹೋಗಿರುವಳು?"

"ನನ್ನ ಸೀತೆಯನ್ನು ಬಾದಶಹನ ಝನಾನಖಾನೆಯಲ್ಲಿ ಸೇರಿಸುವದಕ್ಕಾಗಿ ಆ ರಕ್ಕಸಿಯು-ಆ ಡಾಕಿನಿಯು-ತೆಗೆದುಕೊಂಡು ಹೋಗಿರುವಳು?"

'ಯಾರು?' ಆತುರತೆಯಿಂದ ಅಯೋಧ್ಯಾನಾಥನು ಕೇಳಿದನು.

'ಅವಳೇ-ಅವಳೇ ಆ ರಕ್ಕಸಿ. ಖೋಡಿಯು-ಚಂಡಾಲಿಯು!'

"ಸೀತೆಯು ನಿನ್ನ ಮಗಳೋ?"

"ಅಲ್ಲ; ಸೀತೆಯೇನೂ ನನ್ನ ಹೊಟ್ಟೆಯ ಮಗಳಲ್ಲ. ನನ್ನ ಮಗಳು ಗಂಗೆಯು! ನನ್ನ ಅಳಿಯನು ತೀರಿಕೊಂಡ ಕೆಲವು ದಿವಸಗ

ಳಾದ ತರುವಾಯ ದರ್ಶನಸಿಂಹನು ಗಂಗೆಗೆ ಏನೇನೋ ಭುಲಥಾಪೆಯನ್ನು ಕೊಟ್ಟು, ಅವಳನ್ನು ಬಾದಶಹನ ಝನಾನಖಾನೆಯಲ್ಲಿ ದಾಸಿಯನ್ನಾಗೆ ಮಾಡಿರುವನು.''

''ಸೀತೆಯು ಯಾರ ಮಗಳು?''

''ಸೀತೆಗೆ ತಂದೆ-ತಾಯಿಗಳಾರೂ ಇಲ್ಲ. ಅವಳೊಬ್ಬ ಅನಾಥ ಬಾಲಿಕೆಯು. ಸೀತೆಯ ತಾಯಿ-ತಂದೆಗಳನ್ನೂ, ಅಣ್ಣನನ್ನೂ ಠಕ್ಕರು ಕೊಂದರು ಆ ಮೇಲೆ ಜಯಪಾಲಸಿಂಹನು ಆಕೆಯನ್ನು ತಂದು ಹೊಟ್ಟೆಯ ಮಗಳಂತೆ ಸಲಹುತ್ತಿದ್ದನು. ನಾನು ಈ ಮನೆಯ ದಾಸಿಯು ಬಹು ದಿವಸಗಳಿಂದ ಇಲ್ಲಿಯೇ ಇರುತ್ತೇನೆ''

ಮುದಕಿಯ ಮಾತಿನ ಮೇಲಿಂದ ನೋಡಲು ಸೀತೆಯೆಂದರೆ, ತನ್ನ ತಂಗಿಯಾದ ಕೈಲಾಸೇಶ್ವರಿಯೇ ಎಂದು ಅಯೋಧ್ಯಾನಾಥನು ನಿಶ್ಚಯಿಸಿದನು. ತಂಗಿಯ ದುರ್ವಾರ್ತೆಯನ್ನು ಕೇಳಿ ಅತನ ಹೃದಯವು ತಲ್ಲಣಿಸಿತು; ಅಂತಃಕರಣವು ಕಪ್ಪಿಟ್ಟಿತು; ಕೈಲಾಸೇಶ್ವರಿಯ ಭೆಟ್ಟಿಯಾಗುವದೆಂದು ಮಾಡಿದ ಮಂಡಿಗೆಗಳು ಮನದಲ್ಲಿಯೇ ಕರಗಿದವು; ಮತ್ತು ಅಲ್ಪ-ಸ್ವಲ್ಪ ಇದ್ದ ಆಶಾಂಕುರವು ಬೇರು ಸಹಿತ ಕಿತ್ತೊಗೆಯಲ್ಪಟ್ಟಿತು! ಆಗ ಅತನು ಮನಸ್ಸಿನಲ್ಲಿಯೇ ಅನ್ನುತ್ತಾನೆ: ''ಹಾಯ್! ಹಾಯ್! ಪರಮೇಶ್ವರಾ! ನಾನು ಕೈಲಾಸೇಶ್ವರಿಯ ಆಶೆಯನ್ನಂತೂ ಬಿಟ್ಟುಬಿಟ್ಟಿದ್ದೆನು; ಆದರೆ ದೈವಯೋಗದಿಂದ ಪುನಃ ಆ ಆಶೆಯು ಉದ್ಭವಿಸಿತು. ತಂಗಿಯ ಭೆಟ್ಟಿಯಾಗಬಹುದೆಂದು ಎಷ್ಟು ಉತ್ಕಟೇಚ್ಛೆಯಿಂದ ಇಲ್ಲಿಯ ವರೆಗೆ ಬಂದಿದ್ದೆನು? ಆದರೆ ದೇವಾ! ಅವಳ ಭೆಟ್ಟಿಯಾಗುವದೊತ್ತಟ್ಟಿಗಿರಲಿ, ಅವಳ ಅಮಂಗಲ ವಾರ್ತೆಯನ್ನು ಕೇಳುವ ದುಷ್ಪ್ರಸಂಗವು ಮಾತ್ರಬಂದೊದಗಿತು! ಈ ದಾಹಕ ವಾರ್ತೆಯು ನನ್ನ ಕಿವಿಯ ವರೆಗೆ ಬರದೇ ಇದ್ದರೆ, ಎಷ್ಟು ಹಿತಾಗುತ್ತಿತ್ತಲ್ಲ?''

ಕೆಲಹೊತ್ತಿನ ಮೇಲೆ ಅಯೋಧ್ಯಾನಾಥನು ದುಃಖಾವೇಗವನ್ನು ಅವರಿಸಿಕೊಂಡು:—''ಹೊಟ್ಟೆಯ ಮಗಳಂತೆ ಸಾಕಿ ಸಲುಹಿ

ದೊಡ್ಡವಳನ್ನಾಗ ಮಾಡಿದ ಸೀತೆಯನ್ನು ಜಯಪಾಲಸಿಂಹನು ಲಖನೌಕ್ಕೆ ಹೇಗೆ ಕಳುಹಗೊಟ್ಟನು?"

"ಸ್ವಾಮಿೂ, ಅವರು ಇಲ್ಲಿ ಇದ್ದರೆ ಈ ರಕ್ಕಸಿಗೆ ಸೀತೆಯನ್ನು ಲಖನೌಕ್ಕೆ ಕರೆದೊಯ್ಯುವಷ್ಟು ಧೈರ್ಯವಾದರೂ ಹೇಗಾಗುತ್ತಿತ್ತು?"

ಅಯೋಧ್ಯಾನಾಥನಿಗೆ ದಾಸಿಯು-ಬುಂದಿಯು-ಹೇಳುವದರ ಮರ್ಮವೇ ಹೊಳೆಯಲೊಲ್ಲದು. ಆಗ ಆತನು ದಾಸಿಯನ್ನು ಕುರಿತು:—"ರಕ್ಕಸಿಯೆಂದರೆ ಯಾರು?"

"ಸ್ವಾಮಿೂ, ತಾವು ಆ ಡಾಕಿನಿಯನ್ನು ನೋಡಿದಂತೆ ತೋರುವದಿಲ್ಲ ಅವಳು ಮೊದಲು ಪಾತರದವಳು ದರ್ಶನಸಿಂಹನ ತಾಯಿಯು ಸತ್ತ ಮೇಲೆ ಜಯಪಾಲಸಿಂಹನು ಅವಳನ್ನು ತಂದನು. ರಾಕ್ಷಸಿಯೇ ಅವಳು! ಜಯಪಾಲಸಿಂಹನು ಬೇನೆಯಿಂದ ಹಾಸಿಗೆಯನ್ನು ಹಿಡಿದಾಗ ಅವಳು ಅವನ ಹತ್ತರ ಸಹ ಸುಳಿಯುತ್ತಿದ್ದಿಲ್ಲ; ನನ್ನ ಸೀತೆಯು ಮಾತ್ರ ಯಾವಾಗಲೂ ಅವನ ಹತ್ತರವೇ ಇರುತ್ತಿದ್ದಳು. ನಾನು ಮನೆಗೆಲಸವನ್ನು ಮಾಡುತ್ತಿದ್ದೆನು."

ಅಯೋಧ್ಯಾನಾಥನಿಗೆ ಈಗೀಗ ತುಸ ತುಸ ಹೊಳೆಯಹತ್ತಿತು:—"ಈಗ ಜಯಪಾಲಸಿಂಹನು ಎಲ್ಲಿ ಇರುವನು?"

"ದರ್ಶನಸಿಂಹನು ಅವರನ್ನು ಲಖನೌದ ಹತ್ತರ ಒಂದು ಹಳ್ಳಿಯಲ್ಲಿ ಇಟ್ಟಿರುವನು."

"ದರ್ಶನಸಿಂಹನು ಯಾರು? ಅಯೋಧ್ಯೆಯ ಸೇನಾಪತಿಯಾದ ದರ್ಶನಸಿಂಹನು ಈತನೇ ಏನು? ತಾಯಿೂ, ಎಳ್ಳಷ್ಟೂ ಹೆದರದೆ, ಇದ್ದ ಸಂಗತಿಯನ್ನೆಲ್ಲ ಮನಬಿಚ್ಚಿ ಹೇಳು. ಅಂದರೆ ನಿನ್ನ ಸೀತೆಯನ್ನು ತಿರುಗಿ ತಂದು ಕೊಡುವ ಬಗ್ಗೆ ನಾನು ಶಕ್ತಿ ಮಿಾರಿ ಪ್ರಯತ್ನಿಸುವೆನು."

ತರುಣ ಬೈರಾಗಿಯ ಅಭಯ ವಚನವನ್ನು ಕೇಳಿ, ದಾಸಿಗೆ ಆನಂದವಾಯಿತು. ಅವಳು ಉತ್ಸುಕತೆಯಿಂದ:— "ಸ್ವಾಮಿೂ,

ತಾವು ಸೀತೆಯನ್ನು ತಿರುಗಿ ತಂದು ಕೊಡುವಿರೋ? ಹಾಗಾದರೆ, ಸಂಗಡ ನನ್ನ ಮಗಳಾದ ಗಂಗೆಯನ್ನೂ ಕರಕೊಂಡು ಬರ್ರಿ. ಅಂದರೆ ನಾನು ತಮಗೆ ಜನ್ಮ-ಜನ್ಮಾಂತರಗಳಲ್ಲಿಯೂ ಉಪಕೃತಳಾಗುವೆನು. ಹಿಳ್ಳೀಡು, ತುಸ ವಿಶ್ರಾಂತಿಯನ್ನು ತೆಗೆದುಕೊಳ್ಳಿರಿ. ಹಿಂದಿನಿಂದ ಎಲ್ಲವನ್ನೂ ಹೇಳುತ್ತೇನೆ'' ಎಂದು ನುಡಿದಳು.

ಬುಂದಿಯಾ ದಾಸಿಯು ಜಯಪಾಲಸಿಂಹನ ಮನೆಯಲ್ಲಿ ಸುಮಾರು ಇಪ್ಪತ್ತು-ಇಪ್ಪತ್ತೈದು ವರುಷಗಳಿಂದ ಇರಹತ್ತಿದ್ದರಿಂದ, ಅವಳಿಗೆ ಅನ್ಯಭಾವನೆಯೇ ಇದ್ದಿಲ್ಲ. ಎಲ್ಲರ ಸಂಗಡ ಅವಳು ಸಲಿಗೆಯಿಂದಲೂ, ಪ್ರೇಮದಿಂದಲೂ ನಡೆಯುತ್ತಿದ್ದಳು ಆದರೆ ಆ ವೃದ್ಧಳನ್ನು ಮಾತ್ರ ಪರಮ ಶತ್ರುವೆಂದು ತಿಳಿಯುತ್ತಿದ್ದಳು. ಅದರಂತೆ ದರ್ಶನಸಿಂಹನು ಗಂಗೆಯನ್ನು ಉಬ್ಬಿಸಿ, ಬಾದಶಹನ ಝನಾನಖಾನೆಯಲ್ಲಿ ಕಳಿಸಿದಂದಿನಿಂದ ಆತನ ಸಂಗಡಲೂ ಬುಂದಿಯೆಯು ಶತ್ರುಭಾವದಿಂದಲೇ ವರ್ತಿಸುತ್ತಿದ್ದಳು. ಈ ಇಬ್ಬರ ಹೊರತಾಗಿ ಅವಳು ಎಲ್ಲರ ಸಂಗಡ ಬಹುಶಃ ಸ್ನೇಹದಿಂದಲೇ ನಡೆಯುತ್ತಿದ್ದಳು.

ಬುಂದಿಯೆಯು ಮೊದಲಿನಿಂದಲೂ ಬಲು ಸದ್ಗುಣಿಯು. ಅವಳು ಇಡಿ ಜನ್ಮದಲ್ಲಿ ಹಿಂದು ನಿಮಿಷವನ್ನೂ ಕುಮಾರ್ಗದಲ್ಲಿ ಕಳೆದಿದ್ದಿಲ್ಲ. ಪತಿಯು ನಿಧನದ ನಂತರ ಅವಳು ಮಗಳ ಮನೆಯಲ್ಲಿ ಇರಹತ್ತಿದಳು; ಆದರೆ ಮುಂದೆ ತುಸ ದಿವಸಗಳಲ್ಲಿ ದುರ್ದೈವದಿಂದ ಅಳಿಯನೂ ಕಾಲವಶನಾದ್ದರಿಂದ ಗತಿಗಾಣದ ಆ ವಿಧವಾ ತಾಯಿ-ಮಕ್ಕಳಿಬ್ಬರು ಜಯಪಾಲಸಿಂಹನ ಬೆನ್ನು ಬಿದ್ದರು. ಜಯಪಾಲಸಿಂಹನು ತನ್ನ ಹೆಂಡತಿಯ ಶುಶ್ರೂಷೆಯ ಸಲುವಾಗಿ ಬುಂದಿಯೆಯನ್ನು ನಿಯಮಿಸಿದನು. ಹೀಗೆ ಆ ತಾಯಿ-ಮಕ್ಕಳಿಬ್ಬರು ಪ್ರಾಮಾಣಿಕತನದಿಂದ ಎಲ್ಲ ಮನೆಗೆಲಸಗಳನ್ನು ಮಾಡುತ್ತ ಎಲ್ಲರೊಡನೆ ಸ್ನೇಹದಿಂದ ಕಾಲ ಕಳೆಯುತ್ತಿರಲು, ದರ್ಶನಸಿಂಹನು ಗಂಗೆಗೆ ಏನೇನೋ ಭುಲತಾಪೆಯನ್ನು ಕೊಟ್ಟು, ಆ ತಾಯಿ-ಮಕ್ಕಳನ್ನು ಅಗಲಿಸಿದ್ದನು.

ಬಂದಿಯೂ ಮೇಲ್ಮಾಳಿಗೆಯ ಮೇಲೆ ಅಯೋಧ್ಯಾನಾಥನನ್ನು ಕರೆದೊಯ್ದು, ಆತನಿಗೆ ಚಂಪಾ-ಚಪಲೆಯರ ಬಗ್ಗೆ ಎಷ್ಟೋ ಸಂಗತಿಗಳನ್ನು ಹೇಳಿ ಕೊನೆಗೆ ಅವಳು ಅಂದದ್ದೇನಂದರೆ: "ಮಹಾರಾಜ, ಲಖನೌಕ್ಕೆ ಹೋಗುವ ಮೊದಲನೆಯ ದಿವಸ ಚಂಪಾ-ಚಪಲೆಯರು ಒಂದೇ ಕೋಣೆಯಲ್ಲಿ ಮಲಗಿದ್ದರು. ಚಂಪೆಯೆಂದರೆ, ನನ್ನ ಸೀತೆಯು. ಆಕೆಯು ನನ್ನನ್ನು ತೊಲಗಿ ಹೋಗತಕ್ಕವಳೆಂದು ನನಗೆ ಬಹಳ ವಿಷಾದವೆನಿಸಿತು. ಅವರಿಬ್ಬರೂ ತರುಣಿಯರು ಏನೇನು ಮಾತಾಡುತ್ತಾರೆಂಬವನ್ನು ಕೇಳಬೇಕೆಂದು ಬಾಗಿಲ ಹತ್ತಿರ ಹೋಗಿ ನಿಂತೆನು ನನಗೆ ಅವರ ಎಲ್ಲ ಮಾತು-ಕಥೆಗಳು ನೆಟ್ಟಗೆ ಕೇಳಿಸಲಿಲ್ಲ; ಆದರೆ ಲಖನೌಗೆ ಹೋದ ವೇಳೆ ತಮ್ಮ ಸತೀತ್ವವು ನಷ್ಟವಾಗುವ ಪ್ರಸಂಗ ಬಂದರೆ, ಸೂಕ್ಷ್ಮ ಖಂಜೀರಗಳಿಂದ ಆತ್ಮಹತ್ಯೆಯನ್ನು ಮಾಡಿಕೊಳ್ಳಬೇಕೆಂದು ಅವರು ತಮ್ಮ ತಮ್ಮ ತಲೆಗೂದಲುಗಳಲ್ಲಿ ಒಂದೊಂದು ತೀಕ್ಷ್ಣ ಖಂಜೀರಗಳನ್ನು ಬಚ್ಚಿಟ್ಟುಕೊಂಡದ್ದನ್ನು ನಾನು ಕಿಟಕಿಯೊಳಗಿಂದ ನೋಡಿದೆನು. ಚಪಲೆಯು ಸೀತೆಗೆ ತನ್ನ ತಂದೆಯ ಮತ್ತು ಪತಿಯ ಹೆಸರುಗಳನ್ನು ಹೇಳಿದ್ದು ಮಾತ್ರ ನಾನು ಕೇಳಿದೆನು ತಂದೆಯ ಹೆಸರನ್ನು ಗಂಗಾರಾಮನೆಂದೋ-ಗಂಗಾಪ್ರಸಾದನೆಂದೋ ಹೇಳಿದಳು. ಅದು ನನ್ನ ಸ್ಮರಣೆಯಲ್ಲಿ ನೆಟ್ಟಗೆ ಬರಲೊಲ್ಲದು; ಆದರೆ ಅವಳ ಗಂಡನ ಹೆಸರು ಮಾತ್ರ ಅಯೋಧ್ಯಾನಾಥನೆಂಬದು ನನಗೆ ಚನ್ನಾಗಿ ನೆನಪಿದೆ. ಕೊನೆಕೊನೆಗೆ ಚಪಲೆಯು ಚಂಪೆಯನ್ನು ಕುರಿತು:—"ಚಂಪಾ, ನೀನು ನನ್ನ ಪ್ರಿಯಪತಿಯ ಚಿಕ್ಕ ತಂಗಿಯು. ನನ್ನ ನಾದಿನಿಯು ನೀನೇ! ಇದರಲ್ಲೇನೂ ಸಂದೇಹವಿಲ್ಲ ನಿನ್ನ ನಿಜಸ್ವರೂಪವು ಇಂದು ಹೊಳೆದದ್ದರಿಂದ, ಇಂಥ ದುಃಖದ ಪ್ರಸಂಗದಲ್ಲಿಯೂ ನನಗೆ ಹಿಡಿಸಲಾರದಷ್ಟು ಆನಂದವಾಗಿದೆ. ಇಂದು ನನಗೆ ಮೀನವು ನುಂಗಿದ ಅಮೂಲ್ಯ ಮಾಣಿಕವು ದೊರೆತಂತಾಯಿತು!" ಎಂದಳು.

ಈ ಮೇರೆಗೆ ದಾಸಿಯು ಹೇಳಿದ ಮಾತಿನ ಮೇಲಿಂದ ಚಂಪೆ

ಊರ್ಮಿ ಸೀತೆಯೇ ತನ್ನ ತಂಗಿಯೆಂದೂ, ಚಪಲೆಯೇ ತನ್ನ ಪ್ರಾಣ ಪ್ರಿಯೆಯಾದ ಮಾನಕುಮಾರಿಯೆಂದೂ ಅಯೋಧ್ಯಾನಾಥನು ನಿಶ್ಚಯಿಸಿದನು ಇಂದಿನ ರಾತ್ರಿಯೊಂದನ್ನು ಇಲ್ಲಿ ಕಳೆದು, ಬೆಳಗಾದ ಕೂಡಲೆ ಲಖನೌ ನಗರದ ಹಾದಿಯನ್ನು ಹಿಡಿಯಬೇಕೆಂಬ ತನ್ನ ಮನೋದಯವನ್ನು ಅಯೋಧ್ಯಾನಾಥನು ಆ ದಾಸಿಗೆ ತಿಳಿಸಲು, ಅವಳಿಗೆ ಪರಮಾನಂದವಾಯಿತು ಅವಳು ತಾನೂ ಲಖನೌದ ವರೆಗೆ ಗಂಗಾ-ಸೀತೆಯರ ಶೋಧಕ್ಕೋಸ್ಕರ ಬರುತ್ತೇನೆಂದು ಆ ತರುಣ ಬೈರಾಗಿಗೆ ಹೇಳಿಕೊಳ್ಳಹತ್ತಿದಳು. ಅಯೋಧ್ಯಾನಾಥನು ಅದಕ್ಕೆ ಸಮ್ಮತಿಸಿದನು.

ವಾಚಕರೇ, ಈ ಸಂಸಾರಸಾಗರದಲ್ಲಿ ಮನುಷ್ಯನು ಮಾಡಿದ ಕಲ್ಪನೆಗಳೆಲ್ಲ ಪೂರ್ಣವಾಗದೆ, ಆತನು ಭವಿತವ್ಯದ ಪ್ರಚಂಡ ತೆರೆಗಳ ಸಂಗಡ ತೇಲುತ್ತ ಹೋಗುತ್ತಿರುವನಷ್ಟೇ? ಅದರಂತೆ ಅಯೋಧ್ಯಾನಾಥನೂ, ದಾಸಿಯೂ ಲಖನೌಕ್ಕೆ ಹೋಗಬೇಕೆಂದು ಮಾಡಿದ ಉದ್ದೇಶವು ಸಾಧಿಸಲಿಲ್ಲ. ಯಾಕಂದರೆ, ಅಂದಿನ ರಾತ್ರಿಯೇ ಅಯೋಧ್ಯಾನಾಥನಿಗೆ ಬಲು ಭಯಂಕರ ಜ್ವರಗಳು ಬಂದು, ಆತನು ಹಾಸಿಗೆಯನ್ನೇ ಹಿಡಿದುಬಿಟ್ಟನು! ಈಗೆರಡು ವರುಷಗಳಿಂದ ಆತನು ಚಳಿ-ಬಿಸಿಲು, ಹಗಲು-ರಾತ್ರಿ, ಹಸಿವೆ-ನೀರಡಿಕೆಯನ್ನದೆ, ಹಿಂದೇಸವನೆ ಅವಿಶ್ರಾಂತ ಶ್ರಮಬಟ್ಟಿದ್ದರಿಂದಲೂ, ಅತ್ಯಂತ ಮಾನಸಿಕ ತಾಪದಿಂದಲೂ ಆತನ ದೇಹಸ್ವಾಸ್ಥ್ಯವು ಕೆಟ್ಟಿದ್ದರಲ್ಲಿ ಸೋಜಿಗವಿಲ್ಲ! ಇಲ್ಲಿಯ ವರೆಗೆ ಆತನು ತನ್ನ ಪರಿಚಯವನ್ನು ದಾಸಿಗೆ ಮಾಡಿಕೊಟ್ಟಿದ್ದಿಲ್ಲ; ಆದರೆ ಬರಬರುತ್ತ ತನ್ನ ಜಾಡ್ಯವು ಹೆಚ್ಚುತ್ತಲೇ ಸಾಗಿರುವದನ್ನು ನೋಡಿ, ಕೊನೆಗೆ ಆತನು ತನ್ನ ನಿಜಸ್ಥಿತಿಯನ್ನೆಲ್ಲ ದಾಸಿಗೆ ಹೇಳಿ ಅನ್ನುತ್ತಾನೆ:—"ಬುಂದಿಯೇ! ನೀನು ಹೊಟ್ಟೆಯ ಮಗಳಂತೆ ನನ್ನ ತಂಗಿಯನ್ನು ಸಲುಹಿ, ದೊಡ್ಡವಳನ್ನಾಗಿ ಮಾಡಿರುವಿ. ಹಿಂದುವೇಳೆ ನಾನು ಬೇನೆಯಿಂದ ಪಾರಾಗದಿದ್ದರೆ ಮತ್ತು ನಿನಗೆ ನನ್ನ ಹೆಂಡತಿಯೂ ತಂಗಿಯೂ ಭೆಟ್ಟಿಯಾದರೆ, ಅವರಿಗೆ

ನನ್ನ ಸ್ಥಿತಿಯನ್ನು ಹೇಳು!''

ಅಯೋಧ್ಯಾನಾಥನ ಕರುಣಾಜನಕ ಸ್ಥಿತಿಯನ್ನು ನೋಡಿ, ಪ್ರೇಮಳ ಬಂದಿಯಾದ ಮನಸ್ಸು ಕರಗಿತು ಅವಳ ಕಂಬನಿಗಳು ದಳ ದಳನೆ ಉದುರ ಹತ್ತಿದವು. ಆಗ ಅವಳು: ''ಸ್ವಾಮೀ, ತಾವು ಹೀಗೆ ನುಡಿಯಬೇಡಿರಿ. ನಾನು ತಮ್ಮ ಆರೈಕೆಯನ್ನು ಚನ್ನಾಗಿ ಮಾಡುವೆನು ದೇವರು ತಮಗೆ ಬೇಗನೆ ಒಳಿತು ಮಾಡಬಹುದು'' ಎಂದು ಹೇಳಿ ಅಯೋಧ್ಯಾನಾಥನ ಆರೈಕೆಯನ್ನು ಬೇಸರವಿಲ್ಲದೆ, ಮನಃಪೂರ್ವಕ ಮಾಡತೊಡಗಿದಳು ಹಾಸಿಗೆ ಮೇಲೆ ಬಿದ್ದುಕೊಂಡೇ ಅಯೋಧ್ಯಾನಾಥನು ಪರಮೇಶ್ವರನ ಚಿಂತನೆಯನ್ನು ಮಾಡತೊಡಗಿದನು. 'ದೇವಾ! ನಿನ್ನ ಲೀಲೆಯು ಅತ್ಯಗಾಧವಿರುವದು! ದೈವಬಲದಿಂದಲೇ ನನಗೆ (ತಂದೆ-ತಾಯಿಗಳನ್ನು ಕಳಕೊಂಡು ಅನಾಥನಾದವನಿಗೆ) ಮಾನಕುಮಾರಿಯಂಥ ಪ್ರೇಮಳ ಸತಿಯು ದೊರಕಿರುವಳು ದೈವಬಲದಿಂದಲೇ ಕೈಲಾಸೇಶ್ವರಿಯು ಕಾಲನ ದವಡೆಯೊಳಗಿಂದ ಪಾರಾಗಿ, ಇನ್ನೂ ಜೀವದಿಂದ ಇರುವಳು ದೈವಬಲದಿಂದಲೇ ನನ್ನ ಪ್ರೇಮಪತ್ನಿಯೂ, ತಂಗಿಯೂ ಒಂದೇ ಸ್ಥಳದಲ್ಲಿ ಮಿಲಿತರಾಗಿರುವರು. ದೈವಬಲದಿಂದಲೇ ನನಗೆ ಭಗಿನಿ-ಪತ್ನಿಯರ ವಾರ್ತೆಯು ತಿಳಿಯಿತು; ಮತ್ತು ಆ ದೈವಬಲವೇ ನನಗೆ ನನ್ನ ಹೃದಯೇಶ್ವರಿಯನ್ನೂ ಮತ್ತು ತಂಗಿಯನ್ನೂ ತಂದು ಕೊಡಬಹುದು!' ಎಂದು ಚಿಂತಿಸುತ್ತ ನಿರಾಶೆಯಲ್ಲಿ ಆಶೆಯನ್ನು ತಾಳಿ, ಮೂರು ತಿಂಗಳುಗಳ ಕಾಲವನ್ನು ಕಾನಪುರದಲ್ಲಿಯ ಜಯಪಾಲಸಿಂಹನ ಮನೆಯಲ್ಲೇ ಕಳೆದನು.

---

## ಕರ್ಮಫಲ.



ಪ್ರಿಯವಾಚಕರೇ, ಅಯೋಧ್ಯಾನಾಥನ ಬೇನೆಯು ವಾಸಿಯಾಗುವ ವರೆಗೆ ಆತನನ್ನು ಕಾನಪುರದಲ್ಲಿಯೇ ಇರಿಸಿ, ನಾವು ಲಖನೌಕ್ಕೆ ಹೋಗೋಣ ನಡೆಯಿರಿ.

ಚಂಪಾ-ಚಪಲೆಯರು ಲಖನೌ ಶಹರಕ್ಕೆ ಬಂದು ನಾಲ್ಕು ತಿಂಗಳು ಕ್ರಮಿಸಿದ್ದವು. ಚಪಲೆಯು ಅಸ್ವಸ್ಥತೆಯನ್ನೇ ಇನ್ನೂ ವ್ಯಕ್ತಪಡಿಸುತಲಿದ್ದಳು. ಚಂಪೆಯು ಮಾತ್ರ ಪುಷ್ಟಳೂ, ನಯನ ಮನೋಹರಳೂ ಆಗಿ ಭೂಲೋಕದ ಅಪ್ಸರೆಯಂತೆ ಒಪ್ಪುತ್ತಿದ್ದಳು. ಆಕೆಯೊಬ್ಬಳನ್ನೇ ಬಾದಶಹನಿಗೆ ಕಾಣಿಕೆಯನ್ನಾಗಿ ಕಳಿಸಿ, ತಾನು ಮುಖ್ಯಾಮಾತ್ಯನಾಗಬೇಕೆಂದು ರಾಜಾ ದರ್ಶನಸಿಂಹನು ಮನಸ್ಸಿನಲ್ಲಿ ಮಂಡಿಗೆಯನ್ನು ತಿನ್ನಹತ್ತಿದ್ದನು. ಆದ್ದರಿಂದ ಅವನು ಒಂದು ದಿನ ಚಂಪೆಯನ್ನು ಕರೆದು:—"ನಾಳಿಗೆ ನೀನು ಬಾದಶಹನ ರಂಗ ಮಹಾಲಿಗೆ ಹೋಗಬೇಕು. ಅಲ್ಲಿ ಉತ್ತಮ ರೀತಿಯಿಂದ ವರ್ತಿಸಿ ಬಾದಶಹನನ್ನು ಪ್ರಸನ್ನೀಕರಿಸಿಕೊಳ್ಳಬೇಕು" ಎಂದು ಆಜ್ಞಾಪಿಸಿದನು. ಈ ಆಜ್ಞೆಯನ್ನು ಕೇಳಿ, ಚಂಪೆಗೆ ಪ್ರಾಣ ಹೋದಷ್ಟು ವ್ಯಥೆಯಾಯಿತು ಅವಳು ಈ ಸಂಗತಿಯನ್ನು ಚಪಲೆಗೆ ತಿಳಿಸಲು, ನೆಲಹಿಡಿದ ಚಪಲೆಯು ಚಟ್ಟನೆದ್ದು ಕುಳಿತು:— "ಎಲಾ ದುಷ್ಟಾ! ಕುಲಘ್ನಾ! ಇಂಥ ಹೇಯವೃತ್ತಿಯಿಂದ ಘನತೆಗೇರಬೇಕೆಂದು ಮಾಡಿರುವಿಯಾ? ಮಾಡು. ನಿನ್ನ ಸೇಡನ್ನು ತೀರಿಸದಿದ್ದರೆ, ಈ ಮಾನ ಕುವರಿಯು ಸಾವಿರಾರು ವರುಷ ನರಕದಲ್ಲಿ ಬೀಳುವಳು!" ಎಂದು ನುಡಿದಳು. ಆಕೆಯ ಆಗಿನ ಆ ಆವೇಶವನ್ನು ನೋಡಿ, ಚಂಪೆಯು ಚಕಿತಳಾದಳು ಇಂದಿನ ವರೆಗೆ ಕೇವಲ ಅಳುತ್ತ ಕೂಡ್ರುತ್ತಿದ್ದ ಚಪಲೆಗೆ ಈ ದಿನ ಇಷ್ಟೊಂದು ವೀರಾವೇಶವು ಹ್ಯಾಗೆ ಬಂತು? ಎಂದು ಯೋಚಿಸಿದಳು. ಆದರೆ ದೈವಲೀಲೆಯು ಈ ಸಂಗತಿಯು ವಿಚಾರಕ್ಕೆ ನಿಲುಕದ ಮಾತಾದ್ದರಿಂದ, ಅವಳು ಹತಾಶಳಾದಳು. ಆಕೆಯು ಹೀಗೆ ಹತಾಶಳಾಗುತ್ತಿರಲು, ಚಪಲೆಯು:—"ತಂಗೀ ಚಂಪಾ, ಇನ್ನು ಮುಂದೆ ಸ್ವಲ್ಪವೂ ಬೆದರಬೇಡ! ನಾನು ಇಷ್ಟು ದಿನ ಅನ್ನ-ನೀರು ಬಿಟ್ಟು ಕೊರಗಿದ್ದೇ ನನ್ನ ತಪ್ಪಾಯಿತು. ಇನ್ನು ಮುಂದೆ ನಾನು ಆ ದುಷ್ಟನ ಪಾರುಪತ್ಯಕ್ಕಾಗಿ ಶಕ್ತಿವಂತಳಾಗುವೆನು. ನೀನು ಬಾದಶಹನ ದರ್ಬಾರಕ್ಕೆ ಹೋಗಿ ನಾನು ಹೇಳಿ

ದಂತೆ ಆಚರಿಸು''ಎಂದು ಆಕೆಯು ಕಿವಿಯಲ್ಲಿ ಏನೇನೋ ಹೇಳಿದಳು. ಆಕೆಯ ಆ ಮಂತ್ರೋಪದೇಶವು ಚಂಪೆಯ ಮನಸ್ಸಿಗೆ ಬಂದದ್ದ ರಿಂದ ಆಕೆಯೂ ಬಹು ಸಂತೋಷಪಟ್ಟಳು. ಆ ದಿನ ಚಂಪಾ-ಚಪಲೆಯರು ಯಥೇಷ್ಟವಾಗಿ ಉಂಡು ಮಲಗಿದರು.

ಮರುದಿನ ರಾಜಾ ದರ್ಶನಸಿಂಹನು ತಕ್ಕ ಸಿಬ್ಬಂದಿಯೊಡನೆ ಚಂಪೆಯನ್ನು ಬಾದಶಹನ ರಂಗಮಹಾಲಿಗೆ ಕಳಿಸಿದನು. ಅಲ್ಲಿಗೆ ಹೋದ ಬಳಿಕ ಆಕೆಯು ಮಾನಕುಮಾರಿಯು ಹೇಳಿದಂತೆ ವರ್ತಿಸಿದಳು. ಚಂಪೆಯ ಚಲ್ವಿಕೆಯನ್ನು ನೋಡಿ ಬಾದಶಹನು ಬೆರಗಾದನು. ಆ ವಿಷಯಾಂಧನಿಗೆ ಚಂಪೆಯನ್ನು ಯಾವಾಗ ಅಪ್ಪಿಕೊಳ್ಳುವೆನೋ, ಎಂಬ ಆತುರತೆಯುಂಟಾಯಿತು. ಕೂಡಲೆ ಅವನು ಬಳಿಯಲ್ಲಿದ್ದ ದಾಸಿಯರ ಮುಖವನ್ನು ನೋಡಿದನು. ಬಾದಶಹನ ಹಿಲವನ್ನು ತಿಳಿದು ಅವರು ಅಲ್ಲಿಂದ ಬೇರೆ ಕಡೆಗೆ ಹೋದರು. ಚಂಪೆಯು ವೀಣೆಯನ್ನು ಬಾರಿಸುತ್ತ ಕುಳಿತಿದ್ದಳು. ಬಾದಶಹನು ಕುಳಿತ ಸ್ಥಳದಿಂದೆದ್ದು ಚಂಪೆಯ ಬಳಿಗೆ ಹೋಗಿ, ಆಕೆಯ ಕೋಮಲ ಗಲ್ಲಕ್ಕೆ ಚುಂಬನವನ್ನೀಯ ಹೋದನು! ಬಾದಶಹನ ಈ ಆತುರತೆಯನ್ನು ತಿಳಿದು, ಚಂಪೆಯು ಚಟ್ಟನೆದ್ದು ನಿಂತು ಕೈಮುಗಿದು ನುಡಿದದೇನಂದರೆ:—ಖಾವಿಂದ, ನನ್ನನ್ನು ಸ್ಪರ್ಶಿಸಬೇಡಿರಿ. ಯಾಕಂದರೆ, ನಾನು ಈ ಮೊದಲು ರಾಜಾ ದರ್ಶನಸಿಂಹನ ದಾಸಿಯಾಗಿರುವೆನು.

ಚಂಪೆಯ ಮುಖದಿಂದ ಇಷ್ಟು ಶಬ್ದಗಳು ಹೊರಡುವದೊಂದೇ ತಡ; ಬಾದಶಹನು ತಪ್ತನಾದನು. ರಾಜಾ ದರ್ಶನಸಿಂಹನು ತನಗೆ ಮೋಸ ಮಾಡಿದನೆಂದು ತಿಳಿದನು. ವಿಷಯಾಂಧರಾದ ರಾಜರಲ್ಲಿ ಸಾರಾಸಾರ ವಿಚಾರವಿರುವದಿಲ್ಲೆಂಬದು ನಿಜವಷ್ಟೇ; ಕೂಡಲೆ ಅವನು ದರ್ಶನಸಿಂಹನನ್ನು ಹಿಡತಂದು, ಸೆರೆಯಲ್ಲಿರಿಸಲು ಸೇವಕರಿಗೆ ಅಪ್ಪಣೆ ಮಾಡಿದನು. ಬಾದಶಹನ ಆಜ್ಞೆಯಾದ ಬಳಿಕ ಕೇಳುವದೇನು? ರಾಜಸೇವಕರು ರಾಜಾ ದರ್ಶನಸಿಂಹನನ್ನು ಹಿಡತಂದು ಸೆರೆಯಲ್ಲಿರಿಸಿದರು! ಯಾವ ದರ್ಶನಸಿಂಹನು ಚಂಪೆಯನ್ನು

ಬಾದಶಹನ ಬಳಿಗೆ ಕಳುಹಿಸಿ, ಮುಖ್ಯಾಮಾತ್ಯಪದವಿಯನ್ನು ಸಂಪಾದಿಸಬೇಕೆಂದು ಹವಣಿಸುತ್ತಿದ್ದನೋ, ಆ ದರ್ಶನಸಿಂಹನು ಚಂಪೆಯ ಕೌಶಲ್ಯದ ಯೋಗದಿಂದ ಸೆರೆಮನೆಯಲ್ಲಿ ಬೀಳಬೇಕಾಯಿತು. ದೈವಗತಿಯು ವಿಚಿತ್ರವು! ದರ್ಶನಸಿಂಹನು ತನ್ನ ಮೇಲೆ ಹೀಗೆ ಭಯಂಕರ ಪ್ರಸಂಗ ಬಂದದ್ದಕ್ಕೆ ಬೆಪ್ಪಾಗಿ ಹೋದನು. ಆತನಿಗೆ ಏನೂ ತಿಳಿಯದಂತಾಯಿತು. ಅರಸು ಮುನಿದರೆ ಸರ್ವವೂ ನಾಶವಾಗುವದೆಂಬದು ಸುಳ್ಳಲ್ಲ ಬಾದಶಹನು ದರ್ಶನಸಿಂಹನ ಹೆಂಡಿರು-ಮಕ್ಕಳನ್ನು ಸಹ ಹಿಡತರಿಸಿ ಸೆರೆಯಲ್ಲಿರಿಸಿದನು.

ಮಾನಕುಮಾರಿಯು ಹೇಳಿದ ಮಂತ್ರವು ಉತ್ತಮ ಫಲವನ್ನು ಕೊಟ್ಟದ್ದರಿಂದ ಚಂಪೆಯು ತುಂಬಾ ಆನಂದಪಟ್ಟು, ಬಾದಶಹನು ಸಿಟ್ಟಾಗಿ ದರ್ಶನಸಿಂಹನ ಪಾರುಪತ್ಯಕ್ಕಾಗಿ ಹೊಂಟು ಹೋಗಲು, ಇತ್ತ ಆಕೆಯು ದೇವರನ್ನು ಕೊಂಡಾಡುತ್ತ ವಿಶ್ವಾಸಿಕ ಸೇವಕರೊಡನೆ ಮನೆಗೆ ಬಂದಳು; ಮತ್ತು ಆದ ಸಂಗತಿಯನ್ನು ಚಪಲೆಗೆ ನಿವೇದಿಸಿದಳು. ತಾನು ಯೋಚಿಸಿದಂತೆ ದರ್ಶನಸಿಂಹನು ಬಾದಶಹನ ನಿಗ್ರಹಕ್ಕೆ ಗುರಿಯಾದದ್ದನ್ನು ನೋಡಿ ಆಕೆಗೆ ಸಮಾಧಾನವಾಯಿತು. ಆಗ ಅವಳು ಚಂಪೆಯನ್ನು ಕುರಿತು:—"ಚಂಪಾ, ಇನ್ನು ಮುಂದೆ ನಾವು ಸುಮ್ಮನೆ ಕೂಡ್ರಬಾರದು. ದೇವರು ನನಗೆ ಈಗ ಹಿಂದು ಬಗೆಯ ಆವೇಶವನ್ನು ಕೊಟ್ಟಿರುವನು. ನಮ್ಮ ವಂಶವು ವೀರಶ್ರೀಯುಳ್ಳದ್ದು. ನನ್ನ ಅಕ್ಕನು ಪ್ರತ್ಯಕ್ಷ ಕಾಳಿಕಾ ಮಾತೆಯಂತಿರುತ್ತಾಳೆ. ನನಗಾದರೂ ಯುದ್ಧಕಲೆಯ ಅಭ್ಯಾಸವಿದೆ; ಆದರೆ ಇನ್ನು ಮುಂದೆ ನಾನು ಕೇವಲ ಅಳುತ್ತ ಕೂಡ್ರದೆ, ಖಡ್ಗದ ಮುಖಾಂತರ ಬಿಡುಗಡೆ ಹೊಂದಲು ಪ್ರಯತ್ನಪಡುವೆನು. ನಮ್ಮನ್ನು ಸೆರೆಯಿರಿಸಿದ ದರ್ಶನಸಿಂಹನು ಈಗ ಸೆರೆಮನೆಯ ಸೋಬತಿಯಾದ್ದರಿಂದ, ನಮ್ಮ ಮೇಲೆ ಇನ್ನು ಮುಂದೆ ಮುಸಲ್ಮಾನರ ಉಪಟಳವಾಗುವದು. ಆ ದುರ್ಜನರ ಕೈಯಿಂದ ಪಾರಾಗಬೇಕಾದರೆ, ನಾವು ಖಡ್ಗಧಾರಿಗಳಾಗಿ ಹೋರಾಡಲಿಕ್ಕೆ ಸಿದ್ಧರಾಗಲಿಕ್ಕೆಬೇಕು" ಎಂದು

ನುಡಿದಳು. ಮಾನಕುಮಾರಿಯು ಈ ಮಾತುಗಳನ್ನು ಕೇಳಿ, ಚಂಪೆಗೆ ಆಶ್ಚರ್ಯವಾಯಿತು. ಅವಳು ಆಕೆಯ ವೀರಶ್ರೀಯನ್ನು ನೋಡಿ, ದಂಗಾಗಿ ಕುಳಿತಳು. ಅಷ್ಟರಲ್ಲಿ ಸಾಧುಸಿಂಹನು ಲಗುಬಗೆಯಿಂದ ಓಡಿ ಬಂದನು. ಅವನಿಗೆ ಶೇಕು ಹತ್ತಿತ್ತು. ಅವನು ಅಟ್ಟದ ಮೇಲೆ ಮುದಕಿಯನ್ನು ಕಾಣದೆ ಕೆಳಗಿಳಿದನು. ಇವನು ಇಷ್ಟೇಕೆ ಗಾಬರಿಯಾಗಿ ಬಂದಿರುವನೆಂದು ಚಂಪಾ-ಚಪಲೆಯರು ಯೋಚನೆ ಗೊಳಗಾದರು.

ಇತ್ತ ಸಾಧುಸಿಂಹನು ಆ ವೃದ್ಧ ಸ್ತ್ರೀಯಳನ್ನು ಹುಡುಕಿ, ನುಡಿದನೇನಂದರೆ:—"ಅವ್ವನವರೇ ಘಾತವಾಯಿತು! ಸರ್ವಸ್ವವೂ ನಾಶವಾಯಿತು!! ನಮ್ಮ ಮಹಾರಾಜರನ್ನು ಇಂದು ಸಂಜೆಯೊಳಗಾಗಿಯೇ ಗಲ್ಲಿಗೆ ಹಾಕುತ್ತಾರಂತೆ! ಇಲ್ಲಿಯ ವಸ್ತ್ರ-ಒಡವೆಗಳನ್ನೂ, ಬೆಲೆಯುಳ್ಳ ವಸ್ತ್ರಾಭರಣಗಳನ್ನೂ ಹರಣ ಮಾಡಲಿಕ್ಕೆ ಬಾದಶಹನ ಸೈನ್ಯವು ಸಜ್ಜಾಗಿ ಹೊರಟಿರುವದು!

ಮುದಕಿಯ ಮೈಮೇಲೆ ಆಕಾಶವೇ ಕಡಕೊಂಡು ಬಿದ್ದಂತಾಯಿತು; ಅವಳ ಧೈರ್ಯವು ಕುಗ್ಗಿತು; ಉತ್ಸಾಹವು ಹಿಮ್ಮೆಟ್ಟಿತು; ಕಣ್ಣುಗಳು ಕತ್ತಲುಗುಡಿಸಿದವು; ತಲೆಯು ತಿರುಗಹತ್ತಿತು. ಅವಳು ಹುಚ್ಚಿಯಂತೆ:—"ಸಾಧೂ! ಏನು ಮಾಡಲಿ? ನಾವು ಹೆಂಗಸರು ಓಡಿ ಹೋಗುವ ಬಗೆ ಹೇಗೆ?" ಎಂದಳು.

ಸಾಧು:—"ಬಹಳ ಇಕ್ಕಟ್ಟಿನ ಪ್ರಸಂಗವು ಬಂದಿತು. ಹೆಚ್ಚು ವಿಚಾರಕ್ಕೆ ಆಸ್ಪದವಿಲ್ಲ. ಮನೆಯಲ್ಲಿದ್ದ ಎಲ್ಲ ಬೆಳ್ಳಿ-ಬಂಗಾರಗಳ ಒಡವೆಗಳನ್ನು ಒಂದು ಪೆಟ್ಟಿಗೆಯಲ್ಲಿ ತುಂಬಿ, ನನ್ನ ಕಡೆಗೆ ಕೊಡಿರಿ; ಮತ್ತು ಲಗುಬಗೆಯಿಂದ ನನ್ನೊಡನೆ ಹೊರಹೊರಡಿರಿ."

ಕೂಡಲೆ ಆ ವೃದ್ಧಳು ಒಂದು ಪೆಟ್ಟಿಗೆಯಲ್ಲಿ ಜಯಪಾಲಸಿಂಹನನ್ನು ವಂಚಿಸಿ ಗಳಿಸಿದ ಐದಾರು ಸಾವಿರ ಮೊಹರುಗಳನ್ನೂ, ಮನೆಯಲ್ಲಿಯ ಎಲ್ಲ ವಸ್ತ್ರ-ಒಡವೆಗಳನ್ನೂ ಎರಡು ಪೆಟ್ಟಿಗೆಗಳಲ್ಲಿ ತುಂಬಿದಳು. ಸಾಧುಸಿಂಹನು ಮೊಹರಿನ ಪೆಟ್ಟಿಗೆಯನ್ನು ತೆಗೆದು

ಕೊಳ್ಳಲು ಸಮ್ಮತಿಸಿದನು. ಇಷ್ಟೆಲ್ಲ ಸಿದ್ಧತೆಯಾದ ಬಳಿಕ, ಮುದಕಿಯು ಕೈಲಾಸೇಶ್ವರಿ(ಚಂಪೆ)ಯನ್ನು ಕುರಿತು:— "ಏ ಲವಂಡೀ, ಇನ್ನೂ ನೀನು ತಣ್ಣಗೆ ಕುಳಿತಿರುವೆಯಲ್ಲ? ಇನ್ನೊಂದು ಗಳಿಗೆಗೆ ನಿನ್ನ ಅವಸ್ಥೆ ಏನಾದೀತೆಂಬದು ನಿನಗೆ ಗೊತ್ತಿಲ್ಲವೇ? ಬೇಗನೆ ಏಳು, ಈ ದಾಗೀನಗಳ ಪೆಟ್ಟಿಗೆಯನ್ನು ಹೊರು" ಎಂದಳು.

ಆಗ ಕೈಲಾಸೇಶ್ವರಿಯು ಸಂತಾಪದಿಂದ:- "ಮುಂಡೇ, ಹಾಳಾಗಿ ಹೋಗು! ನಾನು ಬರುವದಿಲ್ಲ" ಎಂದಳು. ಬಳಿಕ ಆ ಮುದಕಿಯು ಚಂಪೆಯನ್ನು ಶಪಿಸುತ್ತ, ಆ ಪೆಟ್ಟಿಗೆಗಳನ್ನು ತಕ್ಕೊಂಡು ಸಾಧುಸಿಂಹನೊಡನೆ ಅಲ್ಲಿಂದ ಪಲಾಯನ ಹೇಳಿಸಿದಳು. ಆಕೆಯು ಓಡಿ ಹೋದ ಕೆಲ ಹೊತ್ತಿನಲ್ಲಿಯೇ ಬಾದಶಹನ ದಂಡಾಳುಗಳು ರಾಜಾ ದರ್ಶನಸಿಂಹನ ಮನೆಯನ್ನು ಮುತ್ತಿ, ಅಲ್ಲಿದ್ದ ಆತನ ಪರಿವಾರವನ್ನು ಸೆರೆ ಹಿಡಿದರು. ಆನೆ, ಕುದುರೆ, ವಸ್ತ್ರ, ಒಡವೆ ಮೊದಲಾದವುಗಳು ಮುಸಲ್ಮಾನರ ಪಾಲಾದವು ಈ ಸುಲಿಗೆಯಲ್ಲಿ ಚಂಪಾ-ಚಪಲೆಯರೆಂಬ ಎರಡು ಸ್ತ್ರೀರತ್ನಗಳು ಬಾದಶಹನ ದಂಡಾಳುಗಳ ಕೈ ವಶವಾದವೆಂಬದನ್ನು ಬೇರೆ ಹೇಳುವ ಕಾರಣವಿಲ್ಲ ಇತ್ತ ಕರ್ಮಫಲವನ್ನು ಭೋಗಿಸುವದಕ್ಕೆ ದರ್ಶನಸಿಂಹನು ಅಂದೇ ಗಲ್ಲಿಗೇರಿಸಲ್ಪಟ್ಟನು.!

---

## ಆಪ್ತರ ಸಮಾಗಮ.

ಬಾದಶಹನ ಸೆರೆಯಲ್ಲಿ ಸಿಕ್ಕ ಬಳಿಕ, ಮಾನಕುಮಾರಿಯು ತನ್ನ ಮನೋನಿಶ್ಚಯದಂತೆ ಬಿಡುಗಡೆ ಹೊಂದುವದಕ್ಕಾಗಿ ಪ್ರಯತ್ನ ನಡಿಸಿದಳು. ಆಕೆಯ ಪ್ರಯತ್ನಕ್ಕೆ ದೈವ ಸಹಾಯವು ಜೋಡಾದ್ದರಿಂದ, ಅದು ತೀವ್ರವಾಗಿಯೇ ಫಲಿಸಿತು. ಹಿಂದಕ್ಕೆ ನದಿಯಲ್ಲಿ ಕಾಶೀನಾಥನು ಹಾರಿಕೊಂಡ ಸಂಗತಿಯು ನಮ್ಮ ವಾಚಕರ ಸ್ಮರಣೆಯಲ್ಲಿರಬಹುದು; ಆದರೆ ಆತನು ಸಾಯದೆ, ತೇಲುತ್ತ ಒಬ್ಬ ತಪ

ಸ್ವಿಯ ಕೈಗೆ ಸಿಕ್ಕು ಬದುಕಿದನು. ಆ ತಪಸ್ವಿಯು ಬೇರೆ ಯಾರೂ ಆಗಿರದೆ, ಹಿಮಾಲಯದಲ್ಲಿ ತಪಸ್ಸು ಮಾಡುತ್ತಿದ್ದ ಕಾಶೀನಾಥನ ಅಜ್ಜನೇ ಆಗಿದ್ದನು ಅವನು ತನ್ನ ಸಂತತಿಯ ರಕ್ಷಣೆಗಾಗಿ ಯೋಗ ಶಕ್ತಿಯನ್ನುಪಯೋಗಿಸುತ್ತ ಭೂತಲದ ಮೇಲೆ ಸಂಚರಿಸುತ್ತಿದ್ದನು. ಆತನು ತಾನು ಯಾರೆಂಬದನ್ನು ಹೇಳದೆ, ಕಾಶೀನಾಥನಿಗೆ ಪೂರ್ಣ ಆರೋಗ್ಯವುಂಟಾಗುವ ವರೆಗೆ ತನ್ನಲ್ಲಿಟ್ಟುಕೊಂಡು, ಆ ಬಳಿಕ ಅವ ನಿಗೆ ಅಯೋಧ್ಯೆಯ ನವಾಬನಿದ್ದಲ್ಲಿಗೆ ಹೋಗ ಹೇಳಿದನು. ಕಾಶೀ ನಾಥನ ಮನಸ್ಸಿನಲ್ಲಿ ಯೋಗಾಭ್ಯಾಸ ಮಾಡಿಕೊಂಡಿರುವದಿತ್ತು; ಆದರೆ ಆತನ ಅಜ್ಜನು ಅವನನ್ನು ಅಲ್ಲಿ ಇಟ್ಟುಕೊಳ್ಳದೆ, ಮಾನ ಕುಮಾರಿಯ ಸಹಾಯಾರ್ಥವಾಗಿ ಅಯೋಧ್ಯೆಗೆ ಕಳಿಸಿದ್ದನು.

ಈ ಕಥೆಯ ಪ್ರಾರಂಭದಲ್ಲಿ ಹಿಮಾಲಯದಿಂದ ತಿರುಗಿ ಬಂದ ತರುಣನು ಈತನೇ ಎಂಬದು ನಮ್ಮ ಚಾಣಾಕ್ಷ ವಾಚಕರ ಲಕ್ಷ್ಯ ದಲ್ಲಿ ಬಂದಿರಬಹುದು. ಕಾಶೀನಾಥನು ಅಜ್ಜನ ಉಪದೇಶದಿಂದ ಸ್ಫೂರ್ತಿಗೊಂಡಿದ್ದನು. ಅವನು ಅಯೋಧ್ಯೆಗೆ ಬರಲು, ಬಾದ ಶಹನೂ ಅಲ್ಲಿಗೇ ಬಂದಿದ್ದನು ಮಾನಕುಮಾರಿಯು ತನ್ನ ಬಿಡುಗಡೆ ಗಾಗಿ ಪ್ರಯತ್ನಿಸುತ್ತಿದ್ದಳು ಆಕೆಯು ಅಂತಃಪುರದೊಳಗಿನ ರಜ ಪೂತ ಕಾವಲುಗಾರರ ಮನಸ್ಸು ತಿರುಗಿಸಿ, ಅವರ ಮುಖಾಂತರ ವಾಗಿ ರಜಪೂತ ಸೈನಿಕರಲ್ಲಿ ಬಾದಶಹನ ವಿರುದ್ಧ ಬಂಡನ್ನೆಬ್ಬಿಸುವ ಸಾಹಸ ನಡಿಸಿದ್ದಳು. ಅಷ್ಟರಲ್ಲಿ ಕಾಶೀನಾಥನು ಮೇಲೆ ಹೇಳಿದಂತೆ ವೇಷಾಂತರದಿಂದ ಬಾದಶಹನ ಅಂತಃಪುರದ ಕಾವಲುಗಾರರನ್ನು ಒಲಿಸಿಕೊಂಡು ಮಾನಕುಮಾರಿಗೆ ಭೆಟ್ಟಿಯಾದನು. ಆ ಕಾಲಕ್ಕೆ ಆ ಅಣ್ಣ-ತಂಗಿಯರಿಗೆ ಹ್ಯಾಗೆ ಆಗಿದ್ದೀತೆಂಬದನ್ನು ಬರೆಯುವ ಸಾಮರ್ಥ್ಯವು ನಮ್ಮ ಲೆಕ್ಕಣಿಕೆಯಲ್ಲಿಲ್ಲ; ಆದರೆ ಆ ಮನೋಭಾ ವವನ್ನು ಅವರು ಬಹಿರಂಗ ಪಡಿಸದೆ, ಒಬ್ಬರನ್ನೊಬ್ಬರು ಸಂದರ್ಶಿಸಿ ಯೋಗ್ಯಸಂಧಿಯನ್ನು ಸಾಧಿಸಿ, ಹೇಗೆ ಪಾರಾಗಬೇಕೆಂದು ಯೋಚಿ ಸತೊಡಗಿದರು. ಕಾಶೀನಾಥನು ತನ್ನ ಯೋಚನೆಯನ್ನು ಹೇಳಿ

ದನು. ಕುಮಾರಿಯು ತನ್ನ ವಿಚಾರವನ್ನೂ ಹೇಳಿದಳು. ಇದರಲ್ಲಿ ಕುಮಾರಿಯ ಹಂಚಿಕೆಯೇ ಸಯುಕ್ತಿಕವೆನಿಸಿದ್ದರಿಂದ, ಅದನ್ನು ಕೇಳಿ ಕಾಶೀನಾಥನಿಗೆ ಬಾಹು ಸ್ಫುರಣವಾಯಿತು. ಅತನು ಕುಮಾರಿಯ ಹೇಳಿಕೆಯಂತೆ ಬಾದಶಹನ ದಂಡಿನಲ್ಲಿ ಸೇರಿದನು.

ಕಾಶೀನಾಥನು ದಂಡಿನಲ್ಲಿ ಸೇರಿದಂದಿನಿಂದ ಚಳವಳಿಗೆ ಹೆಚ್ಚು ಕಳೆ ಬಂದಿತು. ಸಾವಿರಾರು ಜನ ರಜಪೂತ ಸೈನಿಕರು ಬಾದಶಹನ ವಿರುದ್ಧ ನಿಲ್ಲಲು ಸಜ್ಜಾದರು. ಇತ್ತ ಮಾನಕುಮಾರಿಯು ಕೈಲಾಸೇಶ್ವರಿಗೆ (ಚಂಪೆಗೆ)ಯುದ್ಧದ ಹಿಡತಗಳನ್ನು ಕಲಿಸಿ, ಅವಳನ್ನೂ ಹುರಿದುಂಬಿಸಿದಳು.

ಪ್ರಮಾಣಕ್ಕೆ ಮೀರಿದ ಉಗಿಯು ಪಾತ್ರೆಯನ್ನು ಹಿಡೆದು ಹೊರಬೀಳುವಂತೆ, ದ್ವೇಷವು ಪ್ರಮಾಣವನ್ನು ಮೀರಿದ್ದರಿಂದ, ಸೈನಿಕರು ಬಾದಶಹನ ಮೇಲೆ ಬೀಳಲು ಹಾತೊರೆಯುತ್ತಿದ್ದರು. ಅವರು ಹಿಂದು ದಿನ ಸಂಕೇತದಂತೆ ಅಂತಃಪುರಕ್ಕೆ ಮುತ್ತಿಗೆಯನ್ನು ಹಾಕಿದರು. ಆ ಕಾಲಕ್ಕೆ ನಬಾಬನು ಅಂತಃಪುರವನ್ನು ಪ್ರವೇಶಿಸಿ ಮಾನಕುಮಾರಿಯ ಸೌಂದರ್ಯವನ್ನು ನೋಡಿ ಮೋಹಿಸಿ, ಆಕೆಯ ಬಳಿಗೆ ಹೋಗಿದ್ದನು. ಇದು ವರೆಗೆ ಆತನು ಆ ಮನಮೋಹಕ ಸುಂದರಿಯನ್ನು ನೋಡಿರಲಿಲ್ಲ ಈ ದಿನ ಅಕಸ್ಮಾತ್ತಾಗಿ ನೋಡಲು, ಅವನ ಕಾಮಾಗ್ನಿಯು ಪ್ರಜ್ವಲಿಸಿತು. ಮಾನಕುಮಾರಿಯು ಅದ್ವಿತೀಯ ಸುಂದರಿಯು! ಅವಳು ಲಖನೌಕ್ಕೆ ಬಂದಂದಿನಿಂದ ಅಳುವದನ್ನು ಬಿಟ್ಟು, ದೇಹಸಾಮರ್ಥ್ಯವನ್ನು ಬೆಳಿಸತೊಡಗಿದ್ದಳು. ಅವಳು ಮುಸಲ್ಮಾನರ ಆಹಾರವನ್ನು ತಕ್ಕೊಳ್ಳದೆ, ಬರಿಯ ಹಾಲು-ಹಣ್ಣುಗಳನ್ನು ತಿನ್ನುತ್ತಿದ್ದಳು. ಹಿಮ್ಮೊಮ್ಮೆ ಕೈಲಾಸೇಶ್ವರಿಯೊಡನೆ ಅಡಿಗಮಾಡಿಕೊಂಡು ಉಣ್ಣುತ್ತಿದ್ದಳು; ಆದ್ದರಿಂದ ಅವಳು ಈಗ ಮೈಕೈ ತುಂಬಿ ಪುಷ್ಟಳಾಗಿದ್ದಳು. ಆದ್ದರಿಂದ ಆಕೆಯು ಕಾಂತಿ ವಿಶೇಷದಿಂದ ಹಿಪ್ಪುತ್ತಿದ್ದಳು. ಇಂಥ ಲೋಕೋತ್ತರ ಸುಂದರಿಯು ದೃಷ್ಟಿಗೆ ಬೀಳಲು ವಿಷಯಾಂಧನಾದ ಬಾದಶಹನಲ್ಲಿ ಕಾಮಸಂಚಾರವಾದದ್ದು

ಸ್ವಾಭಾವಿಕವೇ ಇರುವದು. ಅವನು ಆಶ್ಚರ್ಯಪಡುತ್ತ ಕುಮಾರಿಯಿದ್ದೆಡೆಗೆ ಬರಲು, ಆ ಸಾಧ್ವಿಯು ಅವನನ್ನು ಹಳಿತಾಗಿ ತಿರಸ್ಕರಿಸಿದಳು. ಆಕೆಯ ತಿರಸ್ಕಾರದಿಂದ ಅವನಲ್ಲಿ ಕಾಮಾಗ್ನಿಯು ಮತ್ತಿಷ್ಟು ಪ್ರಜ್ವಲಿಸಿತು. ಅವನು ಮಂದಹಾಸ್ಯದಿಂದ ಆಕೆಯ ಕೈ ಹಿಡಿಯ ಹೋದನು. ಅಷ್ಟರಲ್ಲಿ ಕೈಲಾಸೇಶ್ವರಿಯು ಒಂದು ಖಡ್ಗವನ್ನು ತಂದು-''ನಮ್ಮ ಮೈಯ್ಯ ಕೈ ಮುಟ್ಟಿದರೆ ನಿನ್ನ ಕೈ ಕತ್ತರಿಸುವೆನು'' ಎಂದು ಗದ್ದರಿಸಿದಳು. ಮಾನಕುಮಾರಿಯೂ ಒಂದು ಖಡ್ಗವನ್ನು ತಕ್ಕೊಂಡು ಬಾದಶಹನ ಮೇಲೆ ನೆಗಹಿದಳು. ಅಷ್ಟರಲ್ಲಿ ಮೇಲೆ ಹೇಳಿದಂತೆ ಹೊರಗೆ ಕೋಲಾಹಲವೆದ್ದಿತು. ಬಾದಶಹನ ಮುಸಲ್ಮಾನ ಸಿಪಾಯಿಗಳು ದಾರಿಸಿಕ್ಕತ್ತ ಓಡತೊಡಗಿದ್ದರು. ನಬಾಬನ ಎದೆಯೊಡೆಯಿತು ಆತನು ಅಲ್ಲಿಂದ ಪಲಾಯನ ಸೂಕ್ತವ ಹೇಳಿಸಿದನು.

ಹೀಗೆ ಹೊರಗೆ ಕೋಲಾಹಲವೆಬ್ಬಿಸಿದವರು ರಜಪೂತ ಸಿಪಾಯಿಗಳೆಂಬದನ್ನು ನಮ್ಮ ವಾಚಕರಿಗೆ ಪುನಃ ಹೇಳುವ ಕಾರಣವಿಲ್ಲ. ಅವರಲ್ಲಿ ಕಾಶೀನಾಥನೇ ಅಗ್ರಗಣ್ಯನಾಗಿದ್ದನು. ಆತನು ವೈದಿಕ ಬ್ರಾಹ್ಮಣನಾಗಿದ್ದರೂ, ಸಂತಾಪಾತಿರೇಕದಿಂದ ಹುಲಿಯೋದ್ಧನಂತೆ ಆವೇಶಗೊಂಡಿದ್ದನು. ಕ್ಷಣಾರ್ಧದಲ್ಲಿ ಎಲ್ಲ ಸಿಪಾಯಿಗಳೂ ಅಂತಃಪುರವನ್ನು ಸೇರಿ, ಅಲ್ಲಿದ್ದ ಎಲ್ಲ ಹೆಂಗಳೆಯರ ಬಿಡುಗಡೆಯನ್ನು ಮಾಡಿದರು. ನೀಚನೂ, ವಿಷಯಾಂಧನೂ ಆದ ಆ ನಬಾಬನ ಅಂತಃಪುರದಲ್ಲಿ ಸಾವಿರಾರು ಜನ ಕುಲಸತಿಯರು ಸೆರೆಯಾಗಿದ್ದರು. ಅವರು ದಿನಾಲು ಕಣ್ಣೀರಿನ ಧಾರೆಯಿಂದ ಧರಿತ್ರಿಯನ್ನು ತೋಯಿಸುತ್ತಿದ್ದರು ಕಾಶೀನಾಥನು ತಮ್ಮ ಬಳಿಗೆ ಬಂದ ಕೂಡಲೆ ಮಾನಕುಮಾರಿಯೂ, ಕೈಲಾಸೇಶ್ವರಿಯೂ ತಾವು ಹಿಡಿದಿರುವ ಖಡ್ಗದೊಂದಿಗೆ ಹೊರಬಿದ್ದರು. ಅಷ್ಟರಲ್ಲಿ ಮುಸಲ್ಮಾನರ ಸೈನ್ಯವು ರಜಪೂತ ಸೈನ್ಯವನ್ನು ಮುತ್ತಿತು. ಮಾನಕುಮಾರಿಯು ಒಂದು ದೊಡ್ಡ ಕುದುರೆಯನ್ನು ಏರಿ, ಯುದ್ಧಕ್ಕೆ ನಿಂತಳು. ಕೈಲಾಸೇಶ್ವರಿಯೂ

ಅವಳನ್ನು ಅನುಸರಿಸಿದಳು. ಇವರಿಬ್ಬರ ಈ ಕೃತಿಯನ್ನು ನೋಡಿ ನಬಾಬನ ಸೆರೆಯಲ್ಲಿದ್ದ ಕೆಲ ಜನ ವೀರಸ್ತ್ರೀಯರು ಸ್ಫೂರ್ತಿಗೊಂಡು ನೆಲಕ್ಕುರುಳಿದ ವೀರರ ಖಡ್ಗಗಳನ್ನು ಕಸಿದುಕೊಂಡು ಯುದ್ಧಕ್ಕೆ ನಿಂತರು. ಹೆಂಗಸರ ಈ ಧಾರ್ಷ್ಟ್ಯವನ್ನು ನೋಡಿ ರಜಪೂತ ಸೈನಿಕರು ಹೆಚ್ಚಿನ ಆವೇಶದಿಂದ ಕಾದಲಾರಂಭಿಸಿದರು. ಮುಸಲ್ಮಾನ ಸೈನಿಕರನ್ನು ಕಂಡಲ್ಲಿ ತುಂಡರಿಸಹತ್ತಿದರು. ಈ ಕಾಳಗದಲ್ಲಿ ಮಾನಕುಮಾರಿಯು ಅದ್ವಿತೀಯ ಪರಾಕ್ರಮವನ್ನು ಪ್ರಕಟಿಸಿದಳು!

ಕಾಶೀನಾಥನು ಸಿಪಾಯಿಗಳನ್ನು ಹುರಿದುಂಬಿಸುತಲಿದ್ದನು. ಮಾನಕುಮಾರಿಯ ಶೋಧಕ್ಕಾಗಿಯೇ ಅಯೋಧ್ಯೆಗೆ ಬಂದಿದ್ದ ಅಯೋಧ್ಯಾನಾಥನಿಗೆ ಈ ಯುದ್ಧದ ಸಂಗತಿಯು ಗೊತ್ತಾಗಲು, ಅವನು ಜೀವದ ಮೇಲಿನ ಹಂಗುದೊರೆದು ಕಾಳಗದಲ್ಲಿ ಸೇರಿದನು. ಸ್ವಲ್ಪ ಹೊತ್ತಿನಲ್ಲಿ ಆತನಿಗೂ ಕಾಶೀನಾಥನಿಗೂ ಭೆಟ್ಟಿಯಾಯಿತು. ಪರಸ್ಪರರಿಗೆ ಮಿಗಿಲಾದ ಆನಂದವಾಯಿತು; ಆದರೆ ಆ ಆನಂದದ ಭರದಲ್ಲಿ ವೈಮರೆಯುವಂತೆ ಇದ್ದಿಲ್ಲ. ಅಯೋಧ್ಯಾನಾಥನು ದೂರಿನಿಂದಲೇ ಹೆಂಡತಿಯನ್ನು ನೋಡಿದನು. ಆಕೆಯು ಆದಿಶಕ್ತಿಯಂತೆ ಶತ್ರುಗಳೊಡನೆ ಹೋರಾಡುತ್ತಿದ್ದಳು. ಅಯೋಧ್ಯಾನಾಥನು ಮನದಲ್ಲಿ ನಾಚಿಕೊಂಡು ಅಶ್ವಾರೂಢನಾಗಿ ಪ್ರತಿಪಕ್ಷಿಗಳನ್ನು ಸಂಹರಿಸಲಾರಂಭಿಸಿದನು. ದೈವಬಲವಿದ್ದದರಿಂದ ಮಾನಕುಮಾರಿಯ ಪಕ್ಷಕ್ಕೆ ಜಯವಾಯಿತು. ಅಸಂಖ್ಯ ಜನ ಮುಸಲ್ಮಾನರು ಮಡಿದರು. ರಾಜಧಾನಿಯ ಪ್ರದೇಶವೆಲ್ಲ ಹೆಣಮಯವಾಯಿತು. ಉಳಿದ ಮುಸಲ್ಮಾನ ಸೈನ್ಯವು ಅಂಜಿ ಹಿಂಜರಿಯಹತ್ತಿತು; ಆದರೆ ನಬಾಬನ ಸುಳಿವೇ ಹತ್ತಲಿಲ್ಲ. ಆತನು ತನ್ನ ಸೈನ್ಯದ ಅಧಃಪಾತವನ್ನು ನೋಡಿ, ಇಂಗ್ಲಿಷರ ಸೈನ್ಯವಿದ್ದೆಡೆಗೆ ಆಗಲೇ ಓಡಿಹೋಗಿದ್ದನು. ಮಾನಕುಮಾರಿಯೂ, ಕೈಲಾಸೇಶ್ವರಿಯೂ, ಕಾಶೀನಾಥನೂ ಮತ್ತು ಅಯೋಧ್ಯಾನಾಥನೂ ಕೂಡಿದರು. ಪರಸ್ಪರರನ್ನು ನೋಡಿ ಪರಸ್ಪರರಿಗೆ ಆನಂದವಾಯಿತು. ಶತ್ರುಸಂಹಾರವಾದದ್ದರಿಂದ ಅವರು

ನಿರ್ಭಯರಾಗಿದ್ದರು. ಇನ್ನು ಅವರು ರಜಪೂತ ಸೈನ್ಯದೊಡನೆ ರಾಜಧಾನಿಯನ್ನು ತೊಲಗತಕ್ಕವರು ಅಷ್ಟರಲ್ಲಿ ಇಂಗ್ಲಿಷರ ಸೈನ್ಯವು ಬರುವದೆಂಬ ಸುದ್ದಿಯು ಬಂದಿತು. ಕೂಡಲೆ ಮಾನಕುಮಾರಿಯು ಅಲ್ಲಿಂದ ಬೇಗನೆ ಹೊರ ಹೊರಡಲು ಎಲ್ಲ ಸೈನಿಕರಿಗೂ ಸೂಚಿಸಿದಳು. ಆಕೆಯಲ್ಲಿ ಪೂಜ್ಯಭಾವವನ್ನಿಟ್ಟವರಾದ ಎಲ್ಲ ಸೈನಿಕರು ಹಾ-ಹಾ ಅನ್ನು ವಷ್ಟರಲ್ಲಿ ಪಟ್ಟಣದಿಂದ ಹೊರಬಿದ್ದರು ಕುಮಾರಿಯು ಜೊತೆಯಲ್ಲಿ ಕೈಲಾಸೇಶ್ವರಿಯ ಲ್ಲದೆ, ಸೆರೆಯ ಲ್ಲಿದ್ದ ಎಷ್ಟೋ ಜನ ಹೆಂಗಸರೂ ಓಡಿ ಬಂದರು. ಕುಮಾರಿಯು ಸೈನ್ಯವು ಪಟ್ಟಣದಿಂದ ಬಹು ದೂರ ಒಂ ದಿತ್ತು; ಅದರಿಂದ ಇವರನ್ನು ಬೆನ್ನಟ್ಟಲಿಕ್ಕೆ ಇಂಗ್ಲಿಷರ ತೋಫಖಾ ನೆಯು ಸಮರ್ಥವಾಗಲಿಲ್ಲ; ಆದರೆ ಕೆಲಜನ ಸ್ವಾರರು ಮಾತ್ರ ಬೆನ್ನ ಟ್ಟಿದರು. ಮುಂದೆ ಕೆಲ ಹೊತ್ತಿನ ಮೇಲೆ ಮಾನಕುಮಾರಿಯು ಸೈನ್ಯಕ್ಕೂ ಅವರಿಗೂ ಕೈಗೆ ಕೈ ಹತ್ತಿತು; ಆದರೆ ರಜಪೂತ ಸಿಪಾಯಿ ಗಳ ಮುಂದೆ ಇಂಗ್ಲಿಷರ ಆಟ ನಡೆಯಲಿಲ್ಲ; ಪರಾಜಯ ಹೊಂದಿ ಹಿಂದಿರುಗಬೇಕಾಯಿತು ತೋಫಖಾನೆಯು ಸಂಗಡವಿಲ್ಲದ್ದರಿಂದ ಇಂಗ್ಲಿಷ ಸೇನಾನಾಯಕನು ಮುಂಗೈ ಕಡಿಯುತ್ತ ಮೋರೆ ಕಪ್ಪಗೆ ಮಾಡಿಕೊಂಡು ಹಿಂದಿರುಗಿದನು

ಇತ್ತ ಮಾನಕುಮಾರಿಯು ವಿಲಕ್ಷಣ ಪ್ರತಾಪವನ್ನು ವ್ಯಕ್ತ ಗೊಳಿಸಿ, ಗಂಡ-ಅಣ್ಣ-ನಾದಿನಿಯರೊಡನೆ ಸಾವಿರಾರು ಜನ ಸೈನಿಕ ರನ್ನು ಕೂಡಿಕೊಂಡು ವಿಜಯದುಂದುಭಿ ಹೊಡೆಯಿಸುತ್ತ ಸೀತಾ ಪುರವನ್ನು ಪ್ರವೇಶಿಸಿದಳು

ಇತ್ತ ಸೀತಾಪುರದಲ್ಲಿ ನಾರಾಯಣ-ಚಾಂದಕುಮಾರಿಯರು ತಮ್ಮ ಮೇಲೆ ಮತ್ತೆ ದಾಳಿಯು ಬಂದಿತೆಂದು ಮನದಳಲಿಗೆ ಗುರಿ ಯಾಗಿದ್ದರು ಶಕ್ಯವಿದ್ದಷ್ಟು ಸೈನ್ಯದೊಡನೆ ಕಾದಲು ಅನುವಾಗಿ ದ್ದರು; ಆದರೆ ಬಂದ ಸೈನ್ಯವು ಶತ್ರುಗಳದಾಗಿರದೆ, ಅದರಲ್ಲಿ ತಮ್ಮ ತಂಗಿ-ಅಣ್ಣ ಮೊದಲಾದವರಿರುವರೆಂದು ತಿಳಿದು, ಕೋಟೆಯ ಬಾಗಿಲ ವನ್ನು ತೆರೆದು, ಎಲ್ಲರನ್ನೂ ಒಳಗೆ ಕರೆದುಕೊಂಡರು. ಮಾನಕುಮಾ

ರಿಯು ನಾರಾಯಣ-ಚಾಂದಕುಮಾರಿಯರನ್ನು ಗಟ್ಟಿಯಾಗಿ ಬಿಗಿದ ಪ್ಪಿದಳು. ಆ ಆಪ್ತ ಪರಿವಾರದ ಕಣ್ಣುಗಳಲ್ಲಿ ಆನಂದಾಶ್ರುಗಳು ಧಾರೆಗಟ್ಟಿ ಸುರಿದವು, ಅಂದು ಸೀತಾಪುರದಲ್ಲಿ ಎಲ್ಲಿ ನೋಡಿದಲ್ಲಿ ಸಂಭ್ರಮವೇ ಸಂಭ್ರಮವು! ದೇವಾಲಯಗಳಲ್ಲಿ ಮಂಗಲವಾದ್ಯಗಳು ಮೊಳಗಿದವು. ಸೀತಾಪುರದ ಪ್ರಜೆಗಳಿಗಂತೂ ಅಂದು ದೊಡ್ಡ ಹಬ್ಬವೇ ಆದಂತಾಯಿತು!

---

## ತಪಸ್ವಿಗಳು.

—(೦)—

ಹಿಮಾಚಲವೆಂದರೆ, ಇಹಲೋಕದಲ್ಲಿಯ ಆನಂದ ಭವನವೂ, ಪ್ರಶಾಂತ ಸ್ಥಳವೂ, ನಯನಾಹ್ಲಾದದಾಯಕವಾದ ಮನೋಹರ ಭೂಮಿಕೆಯೂ, ಪೃಥ್ವಿಯ ಮೇಲಿನ ನಂದನ ವನವೂ ಎಂದು ಹೇಳಬಹುದು. ಹಿಮಗಿರಿಯ ನಯನ ಮನೋಹರ ನೋಟದಿಂದ ಬೇಸರಾದಂಥ ಅರಸಿಕನೂ, ಚಿಂತಾಯುಕ್ತನೂ, ತಾಪತ್ರಯಗಳಿಂದ ಬಳಲಿದವನೂ ಸಹ ತನ್ನ ಚಿಂತೆ-ತಾಪತ್ರಯಗಳಿಂದ ಬೆರೆದ ಅರ ಸಿಕ ಮನಸ್ಸನ್ನು ಬದಿಗೊತ್ತಿ, ಆನಂದವನ್ನು ಪಡೆಯಬಹುದು. ಕೆಲವೆಡೆಯಲ್ಲಿ ಹಚ್ಚನ್ನ ಎಳೆಗರಿಕೆಯು ನಯನ ಮನೋಹರವಾಗಿ ತೋರುತ್ತಿದ್ದರೆ, ಕೆಲವೆಡೆಯಲ್ಲಿ ನೀಲ-ಪೀತ ವರ್ಣಗಳ ಪರ್ಣಗಳು ಶೋಭಿಸುತ್ತಿರುತ್ತವೆ; ಕೆಲವೆಡೆಯಲ್ಲಿ ತೇಗು-ದೇವದ್ವಾರಗಳ ಗಗನ ಚುಂಬಿತ ವೃಕ್ಷಗಳಿದ್ದರೆ, ಮತ್ತೊಂದೆಡೆಯಲ್ಲಿ ಅತಿ ಸಣ್ಣ ವೃಕ್ಷಗಳಿ ರುತ್ತವೆ; ಕೆಲವು ಭಾಗವು ವೃಕ್ಷ-ಲತೆಗಳಿಂದ ಅತ್ಯಂತ ದಟ್ಟವಾಗಿ ದ್ದರೆ, ಮತ್ತೊಂದು ಭಾಗವು ಪ್ರಶಸ್ತ ಮೈದಾನದಂತಿರುತ್ತದೆ; ಒಂದು ಭಾಗದಲ್ಲಿ ಹುಲಿ-ಸಿಂಹ ಮುಂತಾದವುಗಳ ಭೀಕರ ಸ್ವರವು ಕೇಳಬರುತ್ತಿದ್ದರೆ, ಇನ್ನೊಂದು ಭಾಗದಲ್ಲಿ ಗಿಳಿ-ಕೋಗಿಲೆಗಳ ಇಂಚ ರವು ಕೇಳಬರುತ್ತದೆ; ಒಂದೆಡೆಯಲ್ಲಿ ಕಾಡಾನೆ, ಕಾಡುಕೋಣ ಮುಂತಾದ ಭೀಕರ ವನ್ಯಪಶುಗಳಿದ್ದರ, ಇನ್ನೊಂದೆಡೆಯಲ್ಲಿ ಇರಿವೆ

ಯಂಥ ಸಾವಿರಾರು ತರದ ಸೂಕ್ಷ್ಮಜಂತುಗಳು ಇರುತ್ತವೆ; ಕೆಲವೆಡೆಯಲ್ಲಿ ಮಾನವ ದೇಹದ ಅತ್ಯುಚ್ಚ ಪದವಿಯನ್ನು ಪಡೆದ ಮುನಿಯೋಗಿಗಳು ವಾಸಿಸುತ್ತಿದ್ದರೆ, ಕೆಲವೆಡೆಯಲ್ಲಿ ಮನುಷ್ಯಪ್ರಾಣಿಗಳಲ್ಲಿ ಎಲ್ಲಕ್ಕೂ ಹೆಚ್ಚು ಹೀನ ಸ್ಥಿತಿಯವರಾದ ಭಿಲ್ಲ, ಗೊಂಡ ಮುಂತಾದವರು ಇರುತ್ತಾರೆ; ಒಂದು ಭಾಗದಲ್ಲಿ ಸಹಿಸಲಸಹ್ಯವಾದ ಅತ್ಯುಷ್ಣಹವೆಯಿದ್ದರೆ, ಮತ್ತೊಂದು ಭಾಗದಲ್ಲಿ ಶೀತಕಟಿಬಂಧದಲ್ಲಿಯ ಚಳಿಗಿಂತ ಮಿಗಿಲಾದ ಶೀತಹವೆಯಿರುತ್ತದೆ! ಪ್ರಿಯಕರನಾದ ಸಮುದ್ರನಾಥನನ್ನು ಅಪ್ಪಿಕೊಳ್ಳುವದರ ಸಲುವಾಗಿ ಅಸಂಖ್ಯ ಹೊಳೆ-ಹಳ್ಳಗಳು ಭರದಿಂದ ಸಾಗಿವೆ; ಬಗೆಬಗೆಯ ಪುಷ್ಪಗುಚ್ಛಗಳೆಂಬ ಅಲಂಕಾರಗಳನ್ನು ಒಯ್ಯಾರದಿಂದ ಧರಿಸಿದ ಲತಾಯುವತಿಯರು ವೃಕ್ಷಗಳೆಂಬ ತಮ್ಮ ತರುಣಪತಿಗಳನ್ನು ಗಟ್ಟಿಯಾಗಿ ಅಪ್ಪಿಕೊಂಡು, ಅವರೊಡನೆ ಮನಬಂದಂತೆ ವಿಹರಿಸಹತ್ತಿದ್ದಾರೆ!! ಮಾರುತನು ಬಲುದಕ್ಷತೆಯಿಂದ ಪುಷ್ಪ-ಪರಾಗವನ್ನು ಹೊತ್ತುಕೊಂಡು ಹೋದ ಹೋ-ದತ್ತೆಲ್ಲ ಸ್ವರ್ಗೀಯ ಮಕರಂದವನ್ನು ಇಂಪಾಗಿ ಬೀರಹತ್ತಿದ್ದಾನೆ, ಫಲ-ಪುಷ್ಪಗಳ ಭಾರವನ್ನು ಸಹಿಸಲಾರದ ವೃಕ್ಷಲತೆಗಳು ತಲೆವಾಗಿ ಭೂಮಾತೆಗೆ ಅರ್ಘ್ಯಪ್ರದಾನವನ್ನು ಮಾಡುತ್ತಿವೆಯೋ ಏನೋ ಎಂಬಂತೆ, ತಂತರದ ಹಣ್ಣು-ಹೂಗಳನ್ನು ಭೂಮಿಗೆರೆಯುತ್ತ, ಸಹಕಾರಿಗಳಾದ ಬೇರೆ ಗಿಡ-ಬಳ್ಳಿಗಳನ್ನು ಪ್ರೇಮಭರದಿಂದ ಬಿಗಿದಪ್ಪಿಕೊಳ್ಳಹತ್ತಿವೆ! ಬಹಳವೇನು? ಭುವನದ ಮೇಲಿನ ಮೂರು ಕಾಲಗಳೂ, ವಸಂತಾದಿ ಆರು ಋತುಗಳೂ ಹಿಮಗಿರಿಯಲ್ಲೊಂದರಲ್ಲಿಯೇ ಸದಾ-ಸರ್ವದಾ ವಾಸಿಸಿರುತ್ತವೆಂದು ಹೇಳಬಹುದು!

ಇಂಥ ನಯನ ಮನೋಹರವೂ, ಜಗತ್ತಿನ ಸಾರಭೂತವೂ ಆದ ಹಿಮಗಿರಿಯಲ್ಲಿ ಇಬ್ಬರು ತಪಸ್ವಿಗಳು ಮಾತನಾಡುತ್ತ ಕುಳಿತಿದ್ದರು. ಇಂದು ಅವರು ತಮ್ಮ ಜಪಮಾಲೆಯನ್ನು ಕೆಳಗಿಟ್ಟು, ಭೂತಲದ ಮೇಲಿನ ಸಂಧಿಗಳನ್ನು ಕುರಿತು ಸಂಭಾಷಿಸುತ್ತಿದ್ದರೆಂದ ಬಳಿಕ, ಅವರ ಸಂಭಾಷಣವನ್ನು ಕೇಳುವದು ಅವಶ್ಯವು; ಪ್ರಿಯ

ವಾಚಕರೇ, ಈ ತಪಸ್ವಿಗಳ ಸಂಭಾಷಣದ ಕಡೆಗೆ ಅವಧಾನವಿರಲಿ. ಈ ತಪಸ್ವಿಗಳ ಸಂಭಾಷಣವನ್ನು ಕೇಳುವ ಮೊದಲು, ಇವರು ಯಾ-ರೆಂಬದನ್ನು ತಿಳಿದುಕೊಳ್ಳುವಾ.

ಕಾಶೀನಾಥನ ಅಜ್ಜನಾದ ಜಗನ್ನಾಥಶಾಸ್ತ್ರಿಯು ಹಿಮಾಲಯದಲ್ಲಿ ತಪಸ್ಸನ್ನಾಚರಿಸುತ್ತಿದ್ದನೆಂಬದು ನಮ್ಮ ವಾಚಕರಿಗೆ ಅರಿಯದ ಸಂಗತಿಯಲ್ಲ ಈ ಜಗನ್ನಾಥಶಾಸ್ತ್ರಿಯಂತೆ ಸೀತಾಪುರದ ಇನ್ನೊಬ್ಬ ಪಂಡಿತನಾದ ದೇವೀಪ್ರಸಾದನೂ ಹಿಮಾಲಯದಲ್ಲಿ ತಪಸ್ಸನ್ನಾಚರಿಸುತ್ತಿದ್ದನು. ಇವರಿಬ್ಬರಲ್ಲಿ ದೇವೀಪ್ರಸಾದನು ಮುಸಲ್ಮಾನರ ಅತ್ಯಾಚಾರಕ್ಕೆ ಬೇಸತ್ತು ತಪಸ್ವಿಯಾಗಿದ್ದನು. ಜಗನ್ನಾಥಶಾಸ್ತ್ರಿಯೂ ಅಯೋಧ್ಯೆಯ ನಬಾಬನ ದೌರ್ಜನ್ಯವನ್ನು ಬಲ್ಲವನಾಗಿದ್ದನು. ಇವರು ಹಿಮಾಲಯದಂಥ ಪುಣ್ಯಭೂಮಿಯಲ್ಲಿ ದೇಹದಂಡನೆ ಮಾಡಿ ತಪಸ್ಸನ್ನಾಚರಿಸಿದ್ದರಿಂದ, ಯೋಗಶಕ್ತಿಸಂಪನ್ನರಾಗಿದ್ದರು. ಇವರಿಗೆ ಭೂತಳದ ಮೇಲೆ ನಡೆಯುವ ಭೂತ-ವರ್ತಮಾನ-ಭವಿಷ್ಯತ್ತಿನ ಎಲ್ಲ ಸಂಗತಿಗಳೂ ವಿದಿತವಿದ್ದವು. ಯೋಗಶಕ್ತಿಯು ಅಚುಂಬಿತವಾದುದು! ಅದನ್ನು ಸಂಪಾದಿಸಿದವನು ದೇವಸದೃಶನಾಗುವನು. ಅಷ್ಟಸಿದ್ಧಿಗಳು ಯೋಗಶಕ್ತಿಸಂಪನ್ನನ ಮುಂದೆ ಕೈ ಕಟ್ಟಿಕೊಂಡು ನಿಲ್ಲುವವು; ಆದರೆ ಯೋಗಿಗಳು ಬಹುತರವಾಗಿ ಸಿದ್ಧಿಗಳ ಉಪಯೋಗವನ್ನು ಮಾಡಿಕೊಳ್ಳುವದಿಲ್ಲ. ಕೇವಲ ಪರೋಪಕಾರವೆಂದು ಇಲ್ಲವೆ ಇಂಥ ಹಿಬ್ಬರಿಗ ಕಲ್ಯಾಣ ಮಾಡಬೇಕೆಂದು ಇಚ್ಛೆಯಾದರೆ ಮಾತ್ರ ಅವರು ಯೋಗಶಕ್ತಿಯ ಉಪಯೋಗವನ್ನು ಮಾಡಿಕೊಳ್ಳುವರು. ಅದರಂತೆ ತನ್ನ ಸಂತತಿಯ ಮೇಲೆ ಮುಸಲ್ಮಾನರ ಅತ್ಯಾಚಾರ ನಡೆದುದನ್ನು ತಿಳಿದು, ಜಗನ್ನಾಥ ಶಾಸ್ತ್ರಿಯು ಯೌಗಿಕ ಬಲದಿಂದ ಅವರ ರಕ್ಷಣೆಯನ್ನು ಮಾಡುತ್ತಿದ್ದನು. ಸೀತಾಪುರದಲ್ಲಿಯ ನಾರಾಯಣಕುಮಾರಿಗೆ ಸಂಕಟ ಸಮಯದಲ್ಲಿ ಅಭಯವನ್ನು ಕೊಡುತ್ತಿದ್ದ ಅಮಾನುಷ ವ್ಯಕ್ತಿಯು ಜಗನ್ನಾಥಶಾಸ್ತ್ರಿಯೇ ಆಗಿದ್ದನು; ಮತ್ತು ಮಾನಕುಮಾರಿಗೆ ವಿಲಕ್ಷಣವಾದ ಶಕ್ತಿಯನ್ನು ಕೊಟ್ಟವನೂ

ಈತನೇ!!

ಪ್ರಿಯ ವಾಚಕರೇ, ನಿಜವಾದ ಸತ್ಯಶೀಲತನಕ್ಕೆ ದೇವರು ಒಲಿಯುವನೆಂಬದು ಸುಳ್ಳಲ್ಲ. ಮಾನಕುಮಾರಿ-ಕಾಶೀನಾಥ-ಅಯೋಧ್ಯಾನಾಥ ಮೊದಲಾದವರ ಸತ್ಯಶೀಲತನವು ಶ್ರೇಷ್ಠತರಗತಿಯದಾದ್ದರಿಂದ, ಪರಮಾತ್ಮನು ಅವರ ಸತ್ಯಕ್ಕೆ ಮೆಚ್ಚಿ, ಜಗನ್ನಾಥಶಾಸ್ತ್ರಿಯ ಮುಖಾಂತರವಾಗಿ ಅವರ ಕಲ್ಯಾಣ ಮಾಡಿಸಿದನು. ಮಾನಕುಮಾರಿಯು ಯುದ್ಧದಲ್ಲಿ ಜಯಶಾಲಿನಿಯಾಗಿ ಸುಖರೂಪದಿಂದ ಸೀತಾಪುರವನ್ನು ಸೇರಿದ ಬಳಿಕ, ಜಗನಾಥಶಾಸ್ತ್ರಿಯು ಪುನಃ ಯೋಗಶಕ್ತಿಯಿಂದ ಹಿಮಾಲಯದಲ್ಲಿರುವ ತನ್ನ ತಪೋಭೂಮಿಯನ್ನಾಶ್ರಯಿಸಿದನು. ಆಗ ದೇವೀಪ್ರಸಾದನು ಜಗನ್ನಾಥಶಾಸ್ತ್ರಿಯ ಬಳಿಗೆ ಬಂದು ಇಂತು ನುಡಿದನು:--

ದೇವೀಪ್ರಸಾದ:-ಶಾಸ್ತ್ರಿಗಳೇ, ತಪಸ್ಸನ್ನು ಬದಿಗಿಟ್ಟು, ಯಾವ ಕೆಲಸಕ್ಕೋಸ್ಕರ ಹೋಗಿದ್ದಿರಿ?

ಜಗನ್ನಾಥ ಶಾಸ್ತ್ರಿ(ನಕ್ಕು):—ದೇವೀಪ್ರಸಾದ, ಇದು ನಿನಗೆ ಅರಿಯದ ಸಂಗತಿಯೇನು?

ದೇವೀಪ್ರಸಾದ:—ಅರಿಯದ ಸಂಗತಿಯಾಗದಿದ್ದರೂ ಭೂತಲದ ಮೇಲಿನ ದುಃಸ್ಥಿತಿಯನ್ನು ನಿಮ್ಮ ಬಾಯಿಂದಲೇ ಕೇಳಬೇಕೆಂಬ ಇಚ್ಛೆಯಿರುವದು.

ಜಗನ್ನಾಥಶಾಸ್ತ್ರಿ:-ಹಾಗಾದರೆ ಹೇಳುತ್ತೇನೆ ಕೇಳು: ಸದ್ಯಕ್ಕೆ ಭೂತಲದ ಸ್ಥಿತಿಯು ಅತ್ಯಂತ ನಿಕೃಷ್ಟಕ್ಕೆ ಬಂದಿದೆ. ರಾಜರಲ್ಲಿ ನೀತಿಯು ಇಲ್ಲದಾಗಿದೆ. ರಾಜಸೇವಕರು ದುರ್ವ್ಯವಹಾರಪ್ರಿಯರಾಗಿದ್ದಾರೆ. ಅಂದಬಳಿಕ ಪ್ರಜೆಗಳು ಎಷ್ಟು ಸೌಖ್ಯಪಡುತ್ತಿರುವರೆಂಬದನ್ನು ನೀನೇ ತರ್ಕಿಸು. ಇಡಿ ಭೂತಲದ ಮಾತು ಹತ್ತಿಟ್ಟಿಗಿರಲಿ, ಸದ್ಯಕ್ಕೆ ಅಯೋಧ್ಯಾಪ್ರಾಂತನಿವಾಸಿಗಳ ಕಷ್ಟವು ಬಣ್ಣಿಸಲಸದಳವಾಗಿದೆ. ನೀನು ಆ ಕಷ್ಟವನ್ನು ಅನುಭವಿಸಿಯೇ ಬಂದವನಾದ್ದರಿಂದ, ಈ ಬಗ್ಗೆ ನಿನಗೆ ಹೆಚ್ಚಿಗೆನ್ನೇನು ಹೇಳಲಿ?

ದೇವೀಪ್ರಸಾದ(ನಡುವೇ ಬಾಯಿಹಾಕಿ):— ಶಾಸ್ತ್ರಿಗಳೇ, ಅನ್ಯಾಯ, ಪರಮಾನ್ಯಾಯ; ಅಯೋಧ್ಯಾಪ್ರಾಂತನಿವಾಸಿಗಳ ಈ ಗೋಳಾಟವು ಇನ್ನೆಂದಿಗೆ ತಪ್ಪುವದೋ ತಿಳಿಯದು! ಇದುವರೆಗೂ ಆದ ಪ್ರಸಂಗವನ್ನು ಸ್ಮರಿಸಿದರೆ, ನನ್ನ ಮೈ ಕೂದಲುಗಳು ನೆಟ್ಟಗಾಗುತ್ತವೆ

ಜಗನ್ನಾಥಶಾಸ್ತ್ರಿ:—ಹೌದು. ಪರಿಸ್ಥಿತಿಯೇ ಅಷ್ಟು ಕಠಿಣವಿರುತ್ತದೆ; ಆದರೆ ಹಿಂದುಗಳ ಪಾಪಭೋಗವು ತೀರುತ್ತ ಬಂದದ್ದರಿಂದ, ಇನ್ನು ಮುಂದೆ ಅವರು ಈ ಬಗೆಯ ಕಷ್ಟಗಳನ್ನು ಅನುಭವಿಸಲಾರರು.

ದೇವೀಪ್ರಸಾದ:—ಶಾಸ್ತ್ರಿಗಳೇ, ಮಾನಕುಮಾರಿಯು ದರ್ಶನಸಿಂಹನ ಸೆರೆಯಲ್ಲಿ ಸಿಕ್ಕಿದ್ದಳಲ್ಲ? ಆಕೆಯ ಗತಿಯೇನಾಯಿತು?

ಜಗನ್ನಾಥಶಾಸ್ತ್ರಿ:-ಆಕೆಯ ಉದ್ಧಾರಾರ್ಥವಾಗಿಯೇ ನಾನು ತಪಸ್ಸನ್ನು ಬದಿಗಿಟ್ಟು, ಭೂತಲದ ಮೇಲೆ ಹೋಗಿದ್ದೆನು. ದೇವೀಪ್ರಸಾದ, ಕುಮಾರಿಯು ಬಹು ನಿಶ್ಚಲ ಮನಸ್ಸಿನವಳು ಆಕೆಯನ್ನು ಪ್ರಾತಃಸ್ಮರಣೀಯಳಾದ ಸಾಧ್ವಿಯೆಂದು ಕರೆಯಬಹುದು. ಕೈಲಾಸೇಶ್ವರಿಯು ಅನುಭವಶೂನ್ಯಳು; ಆದರೂ ಆಕೆಯ ಪ್ರಾಚೀನ ಪುಣ್ಯವು ಬಲವತ್ತರವಿದ್ದದರಿಂದ, ಅವಳೂ ಆ ನೀಚರ ದವಡೆಯೊಳಗಿಂದ ಸುರಕ್ಷಿತವಾಗಿ ಪಾರಾದಳು. ಅವಳು ಪವಿತ್ರಸ್ಥಿತಿಯಿಂದ ಪಾರಾಗುವದಕ್ಕೆ ಅವಳ ಪ್ರಾಚೀನ ಪುಣ್ಯವೇ ಕಾರಣವೆಂದು ಹೇಳಬಹುದು.

ದೇವೀಪ್ರಸಾದ:—ಕೈಲಾಸೇಶ್ವರಿಯೆಂದರೆ ಯಾರು?

ಜಗನ್ನಾಥಶಾಸ್ತ್ರಿ:—ಆಕೆಯು ಪಂಡಿತ ಶಾಂತಾಪ್ರಸಾದನ ಮಗಳು. ಅಯೋಧ್ಯಾನಾಥನ ತಂಗಿಯು; ನಮ್ಮ ಕಾಶೀನಾಥನ ಭಾವೀ ಧರ್ಮಪತ್ನಿಯು!

ದೇವೀಪ್ರಸಾದ:—ಸರಿ! ಸರಿ! ಅವಳು ನಿಶ್ಚಯವಾಗಿ ಪುಣ್ಯಶಾಲಿನಿಯೇ ಹೌದು. ಕಾಶೀನಾಥನು ಸಾಮಾನ್ಯನಲ್ಲ. ಅವನು

ವಿದ್ಯಾವಂತನಾಗದಿದ್ದರೂ, ಮಹಾ ಸತ್ವಶಾಲಿಯು ಇಂಥವನ ಪಾಣಿಗ್ರಹಣ ಮಾಡುವ ಸುಯೋಗವು ಒದಗಿದ್ದು, ಆಕೆಯ ಪ್ರಾಚೀನ ಪುಣ್ಯವಲ್ಲದೆ ಮತ್ತೇನು?

ಜಗನ್ನಾಥಶಾಸ್ತ್ರಿ:—ಸುಖವು ಪುಣ್ಯದ ಫಲವು; ದುಃಖವು ಪಾಪದ ಫಲವು. ಭವಚಕ್ರದಲ್ಲಿ ಮನುಷ್ಯನು ಸಿಕ್ಕಾಗ, ಪುಣ್ಯ ಭೋಗಿಸುವ ಕಾಲ ಬಂದಾಗ ಸುಖ ಪಡುವನು; ಪಾಪ ಭೋಗಿಸುವ ಕಾಲ ಬಂದಾಗ ದುಃಖಪಡುವನು; ಆದರೆ ಯಾವನು ವಿಶೇಷ ಪುಣ್ಯಶಾಲಿಯಿರುವನೋ, ಅವನು ಮಾತ್ರ ಸರ್ವದಾ ಸುಖಭೋಗಿಯಾಗುವನು ಇದು ಪಾಪಕರ್ಮರತರಾದ ಮನುಷ್ಯರಿಗೆ ತಿಳಿಯುವದಿಲ್ಲ; ಆದರೆ ದೇಹಾಂತರವು ಪ್ರಾಪ್ತಿಯಾದರೂ, ಮಾಡಿದ ಪಾಪಭೋಗವು ತಪ್ಪುವದಿಲ್ಲ. ಅದು ನೆರಳಿನಂತೆ ಸರ್ವದಾ ಬೆನ್ನ ಹಿಂದೆಯೇ ಇರುತ್ತದೆ. ಪುಣ್ಯ-ಪಾಪಗಳೆರಡನ್ನೂ ಆಚರಿಸಿದವರು ಸುಖ-ದುಃಖಗಳೆರಡನ್ನೂ ಭೋಗಿಸುವರು; ಆದರೆ ಪುಣ್ಯದ ಬಲವು ವಿಶೇಷವಿದ್ದವರು ದುಃಖದ ಪ್ರಸಂಗದಲ್ಲಿ ಸತ್ವಗೆಡುವದಿಲ್ಲ; ಮತ್ತು ಅವರ ಜೀವನವು ಅಧರ್ಮದಲ್ಲಿ ವಿಲಯವಾಗುವದಿಲ್ಲ ಪ್ರಸ್ತುತದಲ್ಲಿ ಮಾನಕುಮಾರಿ-ಕೈಲಾಸೇಶ್ವರಿಯರು ಇಂತಹ ಪುಣ್ಯ ಬಲಶಾಲಿಗಳಾದ್ದರಿಂದ ಕಡೆಗೆ ಪವಿತ್ರ ಸುಖಭಾಗಿಗಳಾದರು!

ದೇವೀಪ್ರಸಾದ:— ಈ ಅಯೋಧ್ಯಾಪ್ರಾಂತದ ನಿವಾಸಿಗಳೆಲ್ಲರೂ ಪಾಪ ಮಾಡಿರಬಹುದೇನು?

ಜಗನ್ನಾಥಶಾಸ್ತ್ರಿ:—ಯಾರು ದುಃಖಭಾಗಿಗಳಾಗಿರುವರೋ, ಅವರಲ್ಲಿ ಜನ್ಮಾಂತರದ ಪಾಪಸಂಚಯವಿರುವದೆಂದೇ ತಿಳಿಯಬೇಕು. ದುರ್ಜನನಾದ ಬಾದಶಹನು ಸಾವಿರಾರು ಜನ ಕುಲಸತಿಯರನ್ನು ಸೆರೆಹಿಡಿದಿದ್ದನು; ಆದರೆ ಅವರೆಲ್ಲರು ತಮ್ಮ ಪವಿತ್ರತೆಯನ್ನು ಭಂಗಪಡಿಸಿಕೊಳ್ಳಲಿಲ್ಲ. ಪುಣ್ಯಶಾಲಿಗಳಾದವರ ಪವಿತ್ರತೆಯು ಉಳಿಯಿತು! ಪುಣ್ಯವಿಹೀನರಾದವರ ಪವಿತ್ರತೆಯು ಹಾಳಾಯಿತು! ಕುಮಾರಿಯ ಜೊತೆಗೆ ಬಿಡುಗಡೆ ಹೊಂದಿದ ಸಾವಿರಾರು ಜನ

ಸ್ತ್ರೀಯರಲ್ಲಿ ಪವಿತ್ರತೆಯನ್ನು ಕಾಯ್ದುಕೊಂಡವರು ತಮ್ಮ ತಮ್ಮ ಪತಿಗಳನ್ನು ಹೊಂದಿದರು. ಭ್ರಷ್ಟರಾದವರು ನದಿಯಲ್ಲಿ ಹಾರಿ ಕೊಂಡು ಪ್ರಾಣಬಿಟ್ಟರು!

ದೇವೀಪ್ರಸಾದ:—ಹೀಗೇಕೆ ಮಾಡಿದರು?

ಜಗನ್ನಾಥ ಶಾಸ್ತ್ರಿ:—ಯಾರು ಸೌಖ್ಯಭೋಗಕ್ಕಾಗಿ ಪಾತಿವ್ರತ್ಯವನ್ನು ಭಂಗಪಡಿಸಿಕೊಂಡಿರುವರೋ, ಅವರು ಜನಲಜ್ಜೆಯನ್ನೂ, ಮನಲಜ್ಜೆಯನ್ನೂ ಬಿಟ್ಟು ನಿಃಶಂಕೆಯಿಂದ ಅಡ್ಡಾಡುವರು; ಆದರೆ ಬಲುಮೆಯಿಂದ ಪವಿತ್ರತೆಗೆ ಭಂಗ ತಂದುಕೊಂಡವರು, ಒಲುಮೆಯು ತಪ್ಪಿದ ಬಳಿಕ ಪ್ರಾಣವನ್ನಿಡಲಾರರು ಸಜ್ಜನರಿಗೆ ಮಾನಭಂಗವು ಮರಣಪ್ರಾಯವಾಗಿರುವದು; ಆದ್ದರಿಂದಲೇ ಬಲುಮೆಯಿಂದ ಪಾತಿವ್ರತ್ಯಕ್ಕೆ ಅಂತರಿಸಿದ ಆ ಹೆಂಗಳೆಯರು ಸೀತಾಪುರದ ಬಳಿಯಲ್ಲಿರುವ ನದಿಯಲ್ಲಿ ಮುಳುಗಿ ಪಾಪವಿಮುಕ್ತರಾದರು.

ದೇವೀಪ್ರಸಾದ:-ಹೀಗೆ ಇಷ್ಟು ಸ್ತ್ರೀಹತ್ಯೆಯ ಮಹಾಪಾತಕವನ್ನು ಕಟ್ಟಿಕೊಂಡ ನಬಾಬನಿಗೆ ದೇವರ ದರ್ಬಾರದಲ್ಲಿ ಯಾವ ಬಗೆಯ ಶಿಕ್ಷೆಯೂ ಇಲ್ಲವೇನು?

ಜಗನ್ನಾಥಶಾಸ್ತ್ರಿ:—ದೇವರ ದರ್ಬಾರದಲ್ಲಿ ಎಲ್ಲರಿಗೂ ಶಿಕ್ಷೆಯುಂಟು. ನಬಾಬನ ಪುಣ್ಯವಿರುವವರೆಗೆ ಅವನು ನಡಿಸಿದ ಅತ್ಯಾಚಾರವು ದಕ್ಕಿತು; ಆದರೆ ಈಗ ಪುಣ್ಯ ತೀರಿದ್ದರಿಂದ ಅವನು ರೌರವ ನರಕಕ್ಕೇ ಹೋಗುವನು. ಪುಣ್ಯವಿರುವವರೆಗೆ ಅತ್ಯಾಚಾರವು ನಡೆಯುವದೆಂದೂ ಪಾಪಿಷ್ಠರು ಸುಖಿಗಳಿರುವರೆಂದೂ ತಿಳಿಯಬಾರದು.

ದೇವೀಪ್ರಸಾದ:— ಸರಿ, ಸರಿ. ಶಾಸ್ತ್ರಿಗಳೇ, ನಿಮ್ಮೊಡನೆ ಮಾಡಿದ ಸಂಭಾಷಣದಿಂದ ನನಗೆ ಎಷ್ಟೋ ಮಹತ್ವದ ಸಂಗತಿಗಳು ಗೊತ್ತಾದವು. ನೀವು ಮಾನಕಾರಿಯ ನಿಮಿತ್ತದಿಂದ ಸಾವಿರಾರು ಜನ ಕುಲಸತಿಯರ ಉದ್ಧಾರವಾಡಿದ್ದಲ್ಲದೆ, ಮುಂದೆ ಆಗುವ ಅತ್ಯಾಚಾರಕ್ಕೆ ನೀರು ಹಾಕಿದಂತಾಯಿತು ನಿಮ್ಮ ಯೌಗಿಕ ಬಲವು ಧನ್ಯವಾದದ್ದು. ನಿಮ್ಮ ದೇಶಪ್ರೇಮವಾದರೂ ಅತುಲವಾದದ್ದು.

ಈ ಮೇರೆಗೆ ಆ ತಪಸ್ವಿಗಳಿಬ್ಬರೂ ಸಂಭಾಷಣೆ ನಡಿಸಿ ಪುನಃ ತಪಸ್ಸಿನಲ್ಲಿ ಸ್ಥಿರಚಿತ್ತರಾದರು. "ತಪಸಾ ಕಿಂ ನ ಸಾಧ್ಯತೆ?' ಎಂದು ಹೇಳಿರುವದರಿಂದ, ತಪಸ್ವಿಯಾದವನೇ ರಾಷ್ಟ್ರವನ್ನುದ್ಧರಿಸುವನು.



## ಉಪಸಂಹಾರ.

ರುಗ್ಣಾವಸ್ಥೆಯಲ್ಲಿದ್ದ ಗಂಗಾಪ್ರಸಾದನು ಮಂಗಳ ಮುಖವನ್ನು ನೋಡಿ ಚೇತರಿಸಿಕೊಂಡೆದ್ದು ಕುಳಿತನು; ಆದರೆ ಈ ಹರ್ಷಾತಿರೇಕದಿಂದ ಅವನು ಮುಂದೆ ಬಹು ದಿವಸ ಬಾಳಲಿಲ್ಲ. ನಾರಾಯಣ-ಚಾಂದಕುಮಾರಿಯರು ತಂಗಿಯ ಸಾಹಸಕ್ಕೆ ದಂಗಾಗಿ ಹೋದರು ಕುಮಾರಿಯು ಅತ್ಯಾಗ್ರಹಪಟ್ಟದ್ದರಿಂದ ಕಾಶೀನಾಥನು ಕೈಲಾಸೇಶ್ವರಿಯ ಪಾಣಿಗ್ರಹಣ ಮಾಡಿದನು. ಅಯೋಧ್ಯಾನಾಥನು ಪತಿಭಕ್ತಿಪರಾಯಣಳೂ, ವೀರಕಾಂತೆಯೆನಿಸಿದವಳೂ ಆದ ಹೆಂಡತಿಯ ಸಹವಾಸದಲ್ಲಿ ಸುಖದಿಂದ ಕಾಲಕ್ರಮಣ ಮಾಡುತ್ತ ಕಾಶೀನಾಥನಿಗೆ ಸಹಾಯಕನಾಗಿ ಸೀತಾಪುರದಲ್ಲಿಯೇ ನೆಲೆಸಿದನು. ಮಾನಕುಮಾರಿಯು ಅತ್ಯಂತ ಕಷ್ಟಬಟ್ಟರೂ ಕೊನೆಗೆ ಸುಖವನ್ನು ಕಂಡದ್ದರಿಂದ, ದಯಾಘನ ಪರಮೇಶ್ವರನ ಚರಣಗಳನ್ನು ಸ್ಮರಿಸುತ್ತ ಪತಿಸೇವೆಯಲ್ಲಿ ಆಸಕ್ತಳಾದಳು.

* * * * * * * * * * * * * * *

ಕೈಲಾಸೇಶ್ವರಿಯು ಪತಿಸೇವೆಯಲ್ಲಿ ಆಸಕ್ತಳಾಗಿ, ಸೀತಾಪುರದ ಪ್ರಜೆಗಳನ್ನು ಮಕ್ಕಳಂತೆ ನೋಡುತ್ತ, ಉತ್ತಮ ಗೃಹಿಣಿಯೆಂದೆನಿಸಿಕೊಂಡಳು

† † † † † †

ಸಾಧುಸಿಂಹನು ಎಲ್ಲ ಪ್ರಾಣವನ್ನು ಎತ್ತಿ ಹಾಕಿದ್ದರಿಂದ, ಆ ವೃದ್ಧ ಮುದುಕಿಯು ಆತ್ಮಹತ್ಯೆ ಮಾಡಿಕೊಂಡಿತು. ರಜಪೂತ ಸಿಪಾಯಿಗಳು ಎಬ್ಬಿಸಿದ ಈ ದಂಗೆಯ ಕಾರಣವು ಪ್ರಸಿದ್ಧವಾಗಲು, ನಬಾಬನ ಅತ್ಯಾಚಾರವು ಇಂಗ್ಲಿಷ ಗವ್ಹರ್ನರನಿಗೆ ಗೊತ್ತಾಯಿತು. ಆಗ ಆತನು ನಬಾಬನ ಅತ್ಯಾಚಾರವನ್ನು ನಾಶಗೊಳಿಸಿದನು. ನಬಾಬನು ಹಲ್ಲು ಮುರಿದ ಹಾವಿನಂತಾದನು. ಮಾನಕುಮಾರಿಯಿಂದ ಉಧ್ವಸ್ಥವಾದ ನಬಾಬನ ರಾಜಧಾನಿಯು ವೈಭವವು ಪುನಃ ಮೊದಲಿನ ಸ್ಥಿತಿಯನ್ನು ಹೊಂದಲಿಲ್ಲ.




ಇದನ್ನು ಭಿ. ಪ. ಕಾಳೆ ಇವರು ಆನಂದವನ-ಅಗಡಿಯೊಳಗಿನ ತಮ್ಮ ಮಾಲಕಿಯ ಶ್ರೀ ಶೇಷಾಚಲ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಮುದ್ರಿಸಿದರು.

[illegible]

---

**ಚಂದ್ರಕಾಂತ:**—ಅತ್ಯುತ್ತಮ ಸಾಮಾಜಿಕ ಕಾದಂಬರಿ.
ಬೆಲೆ ೧೨ ಆಣೆ.

**ಕಳವೊ–ಕೊಲೆಯೊ? ಅಥವಾ ಧೀರೇಂದ್ರ:-**
ಹೃದಯಂಗಮವಾದ ಪತ್ತೇದಾರಿ ಕಥೆ ಬೆಲೆ ೮ ಆಣೆ.

ಇವಲ್ಲದೆ ಕೆಳಗೆ ಬರೆದ ಪುಸ್ತಕಗಳ ಹೊಸ ಆವೃತ್ತಿಗಳೂ ಹೊರಟಿರುವವು ಅವಶ್ಯಕರು ಬೇಗನೆ ತರಿಸಿಕೊಳ್ಳತಕ್ಕದ್ದು.

**ಶ್ರೀ ರೇಣುಕಾ ಮಾಹಾತ್ಮ್ಯ:—**
(ಯಲ್ಲಮ್ಮನ ಚರಿತ್ರ) ೨ನೇ ಆವೃತ್ತಿ. ಬೆಲೆ ೪ ಆಣೆ ಟ. ಖ ಬೇರೆ

೩ನೆಯ ಆವೃತ್ತಿ **ವಿಚಿತ್ರ ಚಟ.** ಬೆಲೆ ೮ ಆಣೆ
(ಪತ್ತೇದಾರಿ ಕಾದಂಬರಿ)

೨ನೇ ಆವೃತ್ತಿ **ಜಕಣಾಚಾರ್ಯ.** ಬೆಲೆ ೧೪ ಆಣೆ
[ಐತಿಹಾಸಿಕ ಕಾದಂಬರಿ]

೨ನೇ ಆವೃತ್ತಿ **ಗ್ರಹಲೀಲೆ.** ಬೆಲೆ ೧೨ ಆಣೆ
(ಸಾಮಾಜಿಕ ಕಾದಂಬರಿ)

**ನೇತಾಜಿ** ಅಥವಾ **ಶಿವಾಜಿಯ ಬಲಗೈ:**
೩ನೇ ಆವೃತ್ತಿ:-ಶ್ರೀ ಶಿವಾಜಿ ಕಾಲದ ಐತಿಹಾಸಿಕಕಾದಂಬರಿ ಬೆಲೆ ೧೦ಆಣೆ

ವಿಳಾಸ:—ಭಿ. ಪ. ಕಾಳೆ. ಪ್ರೊಪ್ರಾಯಿಟರ, ಶ್ರೀ ಶೇಷಾಚಲ ಪ್ರೆಸ್ ಮತ್ತು ಗ್ರಂಥಮಾಲೆ, ಪೊ. ಆನಂದವನ. ಜಿ. ಧಾರವಾಡ.